# ಪೌರನೀತಿ

(ಎಸ್. ಎಸ್. ಸಿ. ಪರೀಕ್ಷೆಯ ಹೊಸ ಅಭ್ಯಾಸಕ್ರಮಕ್ಕನುಸರಿಸಿ)

ಪ್ರಿ. ಜಿ. ಬಿ. ಜಠಾರ ಇವರ ಮುನ್ನುಡಿಯೊಂದಿಗೆ





ಬಿ. ಡಿ. ಕರಜಗಿ

ಮತ್ತು

ಎಸ್. ವಾಯ್. ಶೀಲವಂತ



ಮುಖ್ಯ ಮಾರಾಟಗಾರರು:

**ಭಾರತ ಬುಕ್ ಡಿಪೊ, ಧಾರವಾಡ**

೧೯೫೨ ] [೧-೦-೦

## ಅಭಿಪ್ರಾಯಗಳು

ಪೌರನೀತಿ ಈ ವಿಷಯವು ಮಾಧ್ಯಮಿಕ ಶಾಲಾಂತ ಪರೀಕ್ಷೆಯ ಅಭ್ಯಾಸ ಕ್ರಮದಲ್ಲಿ ಸೇರಿರುತ್ತದೆ. ಆದರೆ ಈ ವಿಷಯದಲ್ಲಿ ವಿದ್ಯಾರ್ಥಿಗಳಿಗೆ ಉಪಯುಕ್ತ ಪುಸ್ತಕಗಳಿದ್ದಿಲ್ಲ. ಕನ್ನಡದಲ್ಲಿ ಈ ವಿಷಯದಲ್ಲಿ ಮಾಹಿತಿಪೂರ್ಣ ಪುಸ್ತಕವನ್ನು ಬರೆದು ಶ್ರೀ. ಕರಜಗಿ ಮತ್ತು ಶ್ರೀ. ಶೀಲವಂತ ಇವರು ಈ ಕೊರತೆಯನ್ನು ದೂರ ಮಾಡಿರುವರು.

**ಡಿ. ವ್ಹಿ. ಚಿಕ್ಕರಮನೆ**
ಎಜ್ಯುಕೇಶನಲ್ ಇನಸ್ಪೆಕ್ಟರ,
**ಧಾರವಾಡ.**



The book is one of the few of its Kind on Civics in Kannada. It removes to a great extent the long felt want of a suitable text book for the guidance of the pupils. The treatment is systematic and the subject matter is in accordance with the S. S. C. and Lokashala syllabuses. I therefore strongly recommend the book for the use of the the S. S. C. and Lokashala classes.

R. S. KITTUR
Head Master,
Govt. Agricultural High School,
Bijapur.





# ಪೌರನೀತಿ

(ಎಸ್.ಎಸ್.ಸಿ. ಪರೀಕ್ಷೆಯ ಹೊಸ ಅಭ್ಯಾಸಕ್ರಮಕ್ಕನುಸಾರವಾಗಿ)

ಪ್ರಿ. ಜಿ. ಬಿ. ಜತಾರ ಇವರ ಮುನ್ನುಡಿಯೊಂದಿಗೆ



*


ಲೇಖಕರು:

**ಶ್ರೀ. ಬಿ. ಡಿ. ಕರಜಗಿ.** ಬಿ. ಎ. (ಆನರ್ಸ್) ಬಿ. ಟಿ.

(ಕೆಲಕಾಲ ದಕ್ಷಿಣಾಫೆಲೋ ಕರ್ನಾಟಕ ಕಾಲೇಜ ಧಾರವಾಡ)
ಶಿಕ್ಷಕ, ಸರದಾರ್ಸ್ ಹೈಸ್ಕೂಲ, ಬೆಳಗಾವಿ.

ಮತ್ತು

**ಶ್ರೀ. ಎಸ್. ವಾಯ್. ಶೀಲವಂತ** ಬಿ. ಎ. ಬಿ. ಟಿ. ಡಿ. ಬಿ. ಇ. ಪಿ. ಇಡಿ.


*


ಮುಖ್ಯ ಮಾರಾಟಗಾರರು

**ಭಾರತ ಬುಕ್ ಡಿಪೊ ಗಾಂಧೀ ಚೌಕ, ಧಾರವಾಡ.**

# ಅಭಿಪ್ರಾಯಗಳು

ಪೌರನೀತಿ ಈ ವಿಷಯವು ಮಾಧ್ಯಮಿಕ ಶಾಲಾಂತ ಪರೀಕ್ಷೆಯ ಅಭ್ಯಾಸ ಕ್ರಮದಲ್ಲಿ ಸೇರಿರುತ್ತದೆ. ಆದರೆ ಈ ವಿಷಯದಲ್ಲಿ ವಿದ್ಯಾರ್ಥಿಗಳಿಗೆ ಉಪಯುಕ್ತ ಪುಸ್ತಕಗಳಿದ್ದಿಲ್ಲ. ಕನ್ನಡದಲ್ಲಿ ಈ ವಿಷಯದಲ್ಲಿ ಮಾಹಿತಿಪೂರ್ಣ ಪುಸ್ತಕವನ್ನು ಬರೆದು ಶ್ರೀ. ಕರಜಗಿ ಮತ್ತು ಶ್ರೀ. ಶೀಲವಂತ ಇವರು ಈ ಕೊರತೆಯನ್ನು ದೂರ ಮಾಡಿರುವರು.

**ಡಿ. ವ್ಹಿ. ಚಿಕ್ಕರಮನೆ**
ಎಜ್ಯುಕೇಶನಲ್ ಇನಸ್ಪೆಕ್ಟರ,
**ಧಾರವಾಡ.**



The book is one of the few of its Kind on Civics in Kannada. It removes to a great extent the long felt want of a suitable text book for the guidance of the pupils. The treatment is systematic and the subject matter is in accordance with the S. S. C. and Lokashala syllabuses. I therefore strongly recommend the book for the use of the the S. S. C. and Lokashala classes.

**R. S. KITTUR**
Head Master,
Govt. Agricultural High School,
**Bijapur.**





# ಪೌರನೀತಿ

(ಎಸ್.ಎಸ್.ಸಿ. ಪರೀಕ್ಷೆಯ ಹೊಸ ಅಭ್ಯಾಸಕ್ರಮಕ್ಕನುಸಾರವಾಗಿ)

ಪ್ರಿ. ಜಿ. ಬಿ. ಜಠಾರ ಇವರ ಮುನ್ನುಡಿಯೊಂದಿಗೆ



❋


ಲೇಖಕರು:

**ಶ್ರೀ. ಬಿ. ಡಿ. ಕರಜಗಿ.** ಬಿ. ಎ. (ಆನರ್ಸ) ಬಿ. ಟಿ.

(ಕೆಲಕಾಲ ದಕ್ಷಿಣಾಫೆಲೋ ಕರ್ನಾಟಕ ಕಾಲೇಜ ಧಾರವಾಡ)

ಶಿಕ್ಷಕ, ಸರದಾರ್ಸ್ ಹೈಸ್ಕೂಲ, ಬೆಳಗಾವಿ.

ಮತ್ತು

**ಶ್ರೀ. ಎಸ್. ವಾಯ್. ಶೀಲವಂತ** ಬಿ. ಎ. ಬಿ. ಟಿ. ಡಿ. ಬಿ. ಇ. ಪಿ. ಇಡಿ.


❋


ಮುಖ್ಯ ಮಾರಾಟಗಾರರು

**ಭಾರತ ಬುಕ್ ಡಿಪೊ ಗಾಂಧೀ ಚೌಕ, ಧಾರವಾಡ.**

ಪ್ರಥಮ ಮುದ್ರಣ ೧೯೪೯
ಸುಧಾರಿಸಿದ ದ್ವಿತೀಯ ಮುದ್ರಣ ೧೯೫೦
ಸುಧಾರಿಸಿದ ತೃತೀಯ ಮುದ್ರಣ ೧೯೫೧
ಚತುರ್ಥ ಮುದ್ರಣ ೧೯೫೨

ಬೆಲೆ ಒಂದು ರೂಪಾಯಿ ಮಾತ್ರ

ಮುದ್ರಕರು ಹಾಗು ಪ್ರಕಾಶಕರು:
ಬಿ. ಎನ್. ಹುದ್ದಾರ
**ಭಾರತ ಮುದ್ರಣಾಲಯ,**
**ಧಾರವಾಡ.**

# FOREWORD

This is one of the few books we have in Kannada on Civics which can confidently be recommended to students preparing for the S. S. C. Examination. The authors have been teaching the subject for several years past which has given them a true insight into the requirements of the students both as regards substance and method of treatment. The whole subject of Civics has here been dealt with systematically and exhaustively so as to cover adquately all the topics included in the syllabus........The style is simple and lucid and the general get-up of the book is pleasing.

G. B. Jathar,
Principal, K. E. Board's Arts
and Science College, Dharwar.
Formerly Principal, Elphinstone
College, Bombay and Karnatak
College, Dharwar.

# ಮುನ್ನುಡಿ

ಕನ್ನಡದಲ್ಲಿ ಪೌರನೀತಿಯ ಬಗ್ಗೆ ಇರುವ ಪುಸ್ತಕಗಳು ವಿರಳ. ಎಸ್. ಎಸ್. ಸಿ. ಪರೀಕ್ಷೆಗೆ ಅಭ್ಯಾಸ ಮಾಡುವ ವಿದ್ಯಾರ್ಥಿಗಳಿಗೆ ಧೈರ್ಯದಿಂದ ಶಿಫಾರಸು ಮಾಡಲು ಅರ್ಹವಾದ ಪುಸ್ತಕಗಳಲ್ಲಿ ಇದೊಂದು. ಕಳೆದ ಕೆಲವು ವರುಷಗಳಿಂದ ಲೇಖಕರು ಈ ವಿಷಯವನ್ನು ಕಲಿಸುತ್ತ ಬಂದಿದ್ದರಿಂದ ಅವರಿಗೆ ವಿದ್ಯಾರ್ಥಿಗಳಿಗೆ ಅವಶ್ಯವಾಗಿ ಬೇಕಾಗುವ ವಿಷಯ, ಮತ್ತು ವಿಷಯ ನಿರೂಪಣೆಯ ಬಗ್ಗೆ ಸೂಕ್ಷ್ಮಗ್ರಹಿಕೆಯಾಗಿದೆ. ಪೌರನೀತಿಯ ವಿಷಯವೆಲ್ಲ ಸುವ್ಯವಸ್ಥಿತವಾಗಿಯೂ ಮತ್ತೂ ಸವಿಸ್ತಾರವಾಗಿಯೂ ನಿರೂಪಿಸಲ್ಪಟ್ಟಿದೆ. ಇದರಲ್ಲಿ ಪರೀಕ್ಷೆಯ ಅಭ್ಯಾಸಕ್ರಮದ ಎಲ್ಲ ವಿಷಯಗಳ ಯೋಗ್ಯ ಸೇರ್ಪಡೆಯಾಗಿದೆ.... ಶೈಲಿಯು ಸರಳವಾಗಿಯೂ ತಿಳಿಯಾಗಿಯೂ ಇದೆ. ಪುಸ್ತಕದ ಬಾಹ್ಯ ರಚನೆಯೂ ಅಂದವಾಗಿದೆ.

**ಜಿ. ಬಿ. ಜಠಾರ**

ಪ್ರಿನ್ಸಿಪಾಲ ಕೆ. ಇ. ಬೋರ್ಡಿನ ಆರ್ಟ್ಸ ಮತ್ತು ಸಾಯನ್ಸ
ಕಾಲೇಜ ಧಾರವಾಡ,

ಕೆಲಕಾಲ ಪ್ರಿನ್ಸಿಪಾಲ ಎಲ್ಫಿನ್ಸ್ಟನ್
ಕಾಲೇಜ ಮುಂಬಯಿ ಮತ್ತು
ಕರ್ನಾಟಕ ಕಾಲೇಜ ಧಾರವಾಡ.



# ಅರಿಕೆ

ಚಿರಸ್ಮರಣೀಯವಾದ ೧೫ ನೇ ಆಗಸ್ಟ ೧೯೪೭ ರಿಂದ ಹಿಂದುಸ್ತಾನವು ದಾಸ್ಯ ಶೃಂಖಲೆಗಳಿಂದ ಮುಕ್ತವಾಗಿ ಸ್ವಾತಂತ್ರ್ಯವನ್ನು ಪಡೆಯಿತು. ಅಂದು ಭಾರತವು ಸ್ವತಂತ್ರ ರಾಷ್ಟ್ರವಾಯಿತು. ಮತ್ತು ಭಾರತೀಯರೆಲ್ಲ ಈ ಸ್ವತಂತ್ರ ರಾಷ್ಟ್ರದ ನಾಗರಿಕರಾದರು ಜನರಲ್ಲಿ ತಮ್ಮ ಹಕ್ಕುಬಾಧ್ಯತೆಗಳ ಅರಿವು ಹುಟ್ಟಿತು. ಎಲ್ಲ ಸಂಘ ಸಂಸ್ಥೆಗಳು ಸರ್ವಮಾನ್ಯವಾದ ಪ್ರಜಾ ಪ್ರಭುತ್ವದ ತಳಹದಿಯ ಮೇಲೆ ರಚಿಸಲ್ಪಟ್ಟವು. ಆದುದರಿಂದ ಇಂದು ನಿಜವಾದ ನಾಗರಿಕನಾರು? ಅವನ ಹಕ್ಕು ಹಾಗೂ ಕರ್ತವ್ಯಗಳೇನು? ಅವನು ನೆರೆಹೊರೆಯವರೊಡನೆ ಹೇಗೆ ವರ್ತಿಸಬೇಕು? ಸಂಘ ಸಂಸ್ಥೆಗಳನ್ನು ಹೇಗೆ ಕಟ್ಟಬೇಕು? ಉತ್ತಮ ಸರಕಾರವಾವುದು? ರಾಷ್ಟ್ರಘಟನಾಯಂತ್ರವನ್ನು ಹೇಗೆ ಪರಿಶೀಲಿಸಬೇಕು? ಆದರಲ್ಲಿ ತಾನು ಹೇಗೆ ಪಾತ್ರ ವಹಿಸಬೇಕು? ಮುಂತಾದ ವಿಷಯಗಳ ಜ್ಞಾನವು ಅತ್ಯವಶ್ಯಕವಾಗಿದೆ. ಆದುದರಿಂದ ಈ ಎಲ್ಲ ವಿಷಯಗಳನ್ನು ಈ ಚಿಕ್ಕ ಹೊತ್ತಿಗೆಯಲ್ಲಿ ಚರ್ಚಿಸಲು ಯತ್ನಿಸಲಾಗಿದೆ.

ಎಸ್. ಎಸ್. ಸಿ. ಪರೀಕ್ಷೆಗೆ ಅಭ್ಯಾಸಿಸುವ ವಿದ್ಯಾರ್ಥಿಗಳಿಗೆ ಅವರ ಅಭ್ಯಾಸಕ್ರಮಕ್ಕನುಸರಿಸಿ ಒಂದು ಯೋಗ್ಯವಾದ ಪಠ್ಯಪುಸ್ತಕವನ್ನು ಒದಗಿಸಿ ಕೊಡುವದೇ ಈ ಹೊತ್ತಿಗೆಯ ಮುಖ್ಯ ಉದ್ದೇಶ. ಲೋಕಶಾಲಾ ವಿದ್ಯಾರ್ಥಿಗಳಿಗೂ ಉಪಯುಕ್ತವಾಗಲೆಂದು ಆ ಪರೀಕ್ಷೆಯ ಅಭ್ಯಾಸಕ್ರಮವನ್ನಾದರೂ ಗಮನಿಸಲಾಗಿದೆ ಆದುದರಿಂದ ಈ ಪುಸ್ತಕವು ಎಸ್. ಎಸ್. ಸಿ. ಪರೀಕ್ಷೆಗೆ ಅಭ್ಯಾಸಿಸುವ ವಿದ್ಯಾರ್ಥಿಗಳಿಗೂ, ಲೋಕಶಾಲಾ ವಿದ್ಯಾರ್ಥಿಗಳಿಗೂ, ಕನ್ನಡ ೭ನೆಯ ಇಯತ್ತೆ ಕಲಿಸುವ ಶಿಕ್ಷಕರಿಗೂ, ಮತ್ತು ಸಾಮಾನ್ಯ ವಾಚಕರಿಗೂ ಸದ್ಯದ ದೇಶದ ಪರಿಸ್ಥಿತಿ ಹಾಗೂ ಸಮಸ್ಯೆಗಳ ಬಗ್ಗೆ ಮಾಹಿತಿಯನ್ನೊದಗಿಸುತ್ತದೆ.

# ಅರಿಕೆ

(ಎರಡನೆಯ ಮುದ್ರಣ)

ಇದು ಹೆಚ್ಚಾಗಿ ಮೊದಲನೆಯ ಆವೃತ್ತಿಯ ಪುನರ್ಮುದ್ರಣವಿದೆ. ಆದರೂ ಪ್ರಥಮ ಮುದ್ರಣದ ಕೊರತೆಗಳನ್ನು ಹೋಗಲಾಡಿಸಿದೆ. ಹೊಸ ಅಭ್ಯಾಸಕ್ರಮಕ್ಕನುಸರಿಸಿ ವಿಷಯವಿವೇಚನೆಯಲ್ಲಿ ಅಲ್ಲಲ್ಲಿ ಬದಲಾವಣೆ ಮಾಡಿದೆ. ಕೆಲವು ಪರಿಚ್ಛೇದಗಳನ್ನು ಹೊಸದಾಗಿಯೂ ಸೇರಿಸಲಾಗಿದೆ.

ಮುಂಬೈ ಸರಕಾರದವರು ಈ ಪುಸ್ತಕವನ್ನು ಪಠ್ಯ ಪುಸ್ತಕವೆಂದು ಮಂಜೂರ ಮಾಡಿದ್ದಕ್ಕಾಗಿ ಆಭಾರಿಯಾಗಿದ್ದೇವೆ. ಎಸ್. ಎಸ್. ಸಿ. ಬೋರ್ಡಿನವರು ತಮ್ಮ ಸ್ವಾಮಿತ್ವದ ಪ್ರಶ್ನೆಪತ್ರಿಕೆಗಳನ್ನು ಸೇರಿಸಲು ಅನುಮತಿ ಕೊಟ್ಟಿದ್ದಕ್ಕಾಗಿ ಅವರಿಗೂ ಆಭಾರಿಯಾಗಿದ್ದೇವೆ.

ಪ್ರಕಾಶಕರು

ತೃತೀಯ ಮುದ್ರಣ

ಇದು ಹೆಚ್ಚಾಗಿ ದ್ವಿತೀಯ ಆವೃತ್ತಿಯ ಪುನರ್ಮುದ್ರಣವಿದೆ. ಆದರೂ ಅಲ್ಲಲ್ಲಿ ಬದಲಾವಣೆ ಮಾಡಲಾಗಿದೆ. ವಿವಾಹದ ಕಟ್ಟಳೆಗಳು (Endogamy and Exogamy) ಎಂಬ ವಿಷಯವಾಗಿ ಎರಡು ಪರಿಚ್ಛೇದಗಳನ್ನು ಹೊಸದಾಗಿ ಬರೆಯಲಾಗಿದೆ. ಪುಸ್ತಕವನ್ನು ಸಕಾಲದಲ್ಲಿ ಮುದ್ರಿಸಿಕೊಟ್ಟ ಧಾರವಾಡದ ಭಾರತ ಬುಕ್ ಡಿಪೋದ ಹುದ್ದಾರ ಬಂಧುಗಳಿಗೆ ಆಭಾರಿಯಾಗಿದ್ದೇವೆ.

ಚತುರ್ಥ ಮುದ್ರಣ

ಇದು ಹೆಚ್ಚಾಗಿ ತೃತೀಯ ಮುದ್ರಣದ ಪುನರ್ಮುದ್ರಣವಿದೆ.

ಪ್ರಕಾಶಕರು



# ಅನುಕ್ರಮಣಿಕೆ

## ಅಧ್ಯಾಯ ೧ ಪೌರನೀತಿಯ ಅರ್ಥ ಹಾಗೂ ಅದರ ವ್ಯಾಪ್ತಿ



## ಅಧ್ಯಾಯ ೨ ನಾಗರಿಕತೆ



## ಅಧ್ಯಾಯ ೩ ಸಾಮಾಜಿಕ ಸಂಸ್ಥೆಗಳು



## ಅಧ್ಯಾಯ ೪ ಸರಕಾರವೂ ಮತ್ತು ಅದರ ಕರ್ತವ್ಯಗಳೂ



## ಅಧ್ಯಾಯ ೫ ರಾಷ್ಟ್ರವೂ ರಾಜ್ಯಘಟನಾಯಂತ್ರವೂ

# ಪೌರನೀತಿ

## ಅಧ್ಯಾಯ ೧

### ಪೌರನೀತಿಯ ಅರ್ಥ ಹಾಗೂ ಅದರ ವ್ಯಾಪ್ತಿ

ಮಾನವನು ಸಾವಿರಾರು ವರ್ಷಗಳಿಂದ ಪಟ್ಟಣಗಳಲ್ಲಿ ಮತ್ತು ಹಳ್ಳಿಗಳಲ್ಲಿ ವಾಸಿಸುತ್ತ ಬಂದಿದ್ದರೂ ಪ್ರತಿಯೊಬ್ಬನಿಗೆ ನಾಗರಿಕತೆಯ ಅರಿವನ್ನು ಉಂಟುಮಾಡಿ ಅವನ ಜೀವನಕ್ರಮವು ಸುಖಮಯವಾಗುವಂತೆ ಮಾಡುವ ಶಾಸ್ತ್ರವಾವುದೂ ಬೆಳೆದು ಬಂದಿರಲಿಲ್ಲ. ಆದರೆ ಆತನು ಇತ್ತೀಚಿಗೆ ಅಂತಹದಾದ ಒಂದು ಶಾಸ್ತ್ರವನ್ನು ರೂಪುಗೊಳಿಸಿದ್ದಾನೆ. ಅದುವೇ ಪೌರನೀತಿ. ಅದು ಇನ್ನೂ ಬಾಲ್ಯಾವಸ್ಥೆಯಲ್ಲಿಯೇ ಇದೆ. ಪಾಶ್ಚಾತ್ಯ ದೇಶದಲ್ಲಿ ಕೂಡ Civics (ಪೌರನೀತಿ) ಎಂಬ ಶಬ್ದವು ಒಂದು ವಿಶಿಷ್ಟವಾದ ಅರ್ಥದಲ್ಲಿ ಬಳಿಕೆಯಲ್ಲಿ ಬಂದುದು ೧೮೮೬ರ ಸುಮಾರಿಗೆ. ಈ ವಿಷಯಕ್ಕೆ ಒಂದು ಶಾಸ್ತ್ರ ಸ್ವರೂಪವನ್ನು ಕೊಟ್ಟವರು ಪಾಶ್ಚಿಮಾತ್ಯರು. ಆದುದರಿಂದ ಈ ಶಬ್ದದ ವ್ಯುತ್ಪತ್ತಿಯನ್ನು ತುಸು ಪರಿಶೀಲಿಸುವದು ಅವಶ್ಯ.

Civics ಈ ಶಬ್ದವು ಪಟ್ಟಣ ಎಂಬ ಅರ್ಥದ Civitas ಎಂಬ ಲ್ಯಾಟಿನ್ ಶಬ್ದದಿಂದ ಇಲ್ಲವೆ ಪಟ್ಟಣಿಗ ಎಂಬ ಅರ್ಥದ Civics ಎಂಬ ಶಬ್ದದಿಂದ ಹುಟ್ಟಿದೆ. ಆದುದರಿಂದ ಇದರ ಯೌಗಿಕಾರ್ಥ (Etymological Meaning) ವೆಂದರೆ ನಾಗರಿಕತೆಯ ಅಭ್ಯಾಸ. ಈ ವ್ಯಾಖ್ಯೆಯು

ಆಷ್ಟೊಂದು ಅಸಮಾಧಾನಕರವಿದ್ದರೂ ಪೌರನೀತಿಯು ಎಲ್ಲ ಲಕ್ಷಣ ಗಳನ್ನೊಳಗೊಂಡಿರುವದಿಲ್ಲ. ಇತ್ತೀಚಿಗೆ ಆದು ಕೇವಲ ನಾಗರಿಕನ ಹಕ್ಕು ಮತ್ತು ಕರ್ತವ್ಯಗಳ ಅಭ್ಯಾಸವಾಗಿರದೆ ಅವುಗಳ ನಿರ್ವಹಣೆಗಾಗಿ ಅವಶ್ಯಕ ವಿದ್ದ ಜ್ಞಾನವೂ ಆದರಲ್ಲಿ ಅಡಕವಾಗಿದೆ. ಬೇರೆ ಶಬ್ದಗಳಲ್ಲಿ ಹೇಳುವದಾದರೆ ಮಾನವನು ಎಂತಹ ಪರಿಸ್ಥಿತಿಯಲ್ಲಿ ಶ್ರೇಷ್ಠ ತರಗತಿಯ ಸಾಮಾಜಿಕ ಜೀವನದ ಮಟ್ಟವನ್ನು ಮುಟ್ಟಬಹುದೆಂಬುದನ್ನು ತೋರಿಸಿಕೊಡುವುವೇ ಈ ಶಾಸ್ತ್ರದ ಉದ್ದೇಶವು. ವ್ಯಕ್ತಿವ್ಯಕ್ತಿಗಳ ನಡುವಿನ ಸಂಬಂಧವನ್ನೂ ವ್ಯಕ್ತಿಗೂ ಸಮಾಜಕ್ಕೂ ಇರುವ ಸಂಬಂಧವನ್ನೂ ಮತ್ತು ಮುಖ್ಯವಾಗಿ ವ್ಯಕ್ತಿಗೂ ಸರಕಾರಕ್ಕೂ ಇರಬೇಕಾದ ಸಂಬಂಧವನ್ನೂ ತೋರಿಸುವದೇ ಈ ಶಾಸ್ತ್ರದ ಹೆಗ್ಗುರಿಯು.

ಮೇಲಿನ ವಿವೇಚನೆಯಿಂದ ಪೌರನೀತಿಯು ಸಾಮಾಜಿಕ ಜೀವನ ದಷ್ಟೇ ವ್ಯಾಪಕವಾಗಿದೆ ಎಂಬುದು ಕಂಡುಬರುವದು. ಅದು ಕೇವಲ ಹಳ್ಳಿ ಪಟ್ಟಣಗಳಿಗೆ ಸಂಬಂಧಿಸಿರದೆ ರಾಷ್ಟ್ರಕ್ಕೂ ಇಷ್ಟೇ ಏಕೆ, ಇಡೀ ಪ್ರಪಂಚಕ್ಕೂ ಸಂಬಂಧಿಸಿರುತ್ತದೆ. ನಾಗರಿಕತೆಯ ಬೆಳವಣಿಗೆಗೆ ಕಾರಣವಾದ ಸಾರ್ವ ಜನಿಕ ಹಿತಬುದ್ಧಿ, ಸಾರ್ವಜನಿಕ ಚಟುವಟಿಕೆಗಳ ಬಗ್ಗೆ ಆಸ್ಥೆ, ಮತ್ತು ಸ್ವಹಿತವನ್ನು ಬದಿಗಿಟ್ಟು ಪರರಿಗಾಗಿ ದುಡಿಯುವ ಉದಾತ್ತವಾದ ಬಯಕೆ ಇವೇ ಮುಂತಾದ ಗುಣಗಳು ಅದರಲ್ಲಿ ಸಮಾವೇಶವಾಗುತ್ತವೆ. ಆದ್ದರಿಂದ ಅದು ಮಾನವನ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ಚಟುವಟಿಕೆಗಳ ಸರ್ವತೋಮುಖವಾದ ಅಭ್ಯಾಸ. ಅದರ ಗುರಿಯು ನಾಗರಿಕನ ಪರಿಪೂರ್ಣವಾದ ಜೀವನವನ್ನು ಮತ್ತು ಏಳಿಗೆಯನ್ನು ಸಾಧಿ ಸುವದಿದೆ.

## ಪೌರನೀತಿಯು ವಿಜ್ಞಾನವೋ ಕಲೆಯೋ ?

ವಿಜ್ಞಾನವೆಂದರೆ ಸುವ್ಯವಸ್ಥಿತವಾದ ಜ್ಞಾನ. ಅದು ಕಾರ್ಯ ಕಾರಣ ಗಳ ಸಂಬಂಧವನ್ನು ಸ್ಪಷ್ಟವಾಗಿ ತರ್ಕಶುದ್ಧವಾಗಿ ವಿವೇಚಿಸುತ್ತದೆ. ಅದು ಸರ್ವಮಾನ್ಯವಾದ ತತ್ವಗಳ ಮೇಲೆ ಆಧಾರಭೂತವಾಗಿರುತ್ತದೆ. ಈ ಜ್ಞಾನ ವನ್ನು ಜೀವನದಲ್ಲಿ ಬಳಿಕೆಯಲ್ಲಿ ತರುವದೇ ಕಲೆಯ ಮುಖ್ಯಕೆಲಸವು. ಇದನ್ನು

ಗಮನಿಸಿದರೆ ಪೌರನೀತಿಯು ವಿಜ್ಞಾನವೂ ಮತ್ತು ಕಲೆಯೂ ಆಗಿದೆ ಎಂಬುದು ಕಂಡುಬರುತ್ತದೆ. ಸಮಾಜ ಮತ್ತು ವ್ಯಕ್ತಿಯ ಹಿತಸಾಧನೆಯ ಮಾರ್ಗವನ್ನು ಕಂಡುಹಿಡಿದು ಉತ್ತಮವಾದ ಸಮಾಜವನ್ನು ಕಟ್ಟುವದ ಕ್ಕಾಗಿ ಉಪಯುಕ್ತವಾದ ತತ್ವಗಳನ್ನು ತೋರಿಸುವದರಿಂದ ಪೌರನೀತಿಯು ವಿಜ್ಞಾನವೆನ್ನಬಹುದು. ಈ ತತ್ವಗಳನ್ನು ನಿತ್ಯಜೀವನದಲ್ಲಿ ಉಪಯೋಗಿಸಿ ಅವುಗಳ ಹಿತಾಹಿತಗಳನ್ನು ಅಭ್ಯಸಿಸಲು ಸಹಾಯಮಾಡುವದರಿಂದ ಇದಕ್ಕೆ ಕಲೆಯೆಂತಲೂ ಅನ್ನಬಹುದು.

## ಪೌರನೀತಿಯ ಅಭ್ಯಾಸದ ಪದ್ಧತಿಗಳು

ಇತರ ತರ್ಕಬದ್ಧವಾದ ಶಾಸ್ತ್ರಗಳಂತೆಯೇ ಇದರ ಪದ್ಧತಿಗಳಾದರೂ ಇವೆ. ಎಂದರೆ ಪರಿಶೀಲನೆಗಾಗಿ ಅವಶ್ಯಕವಾದ ಸಂಗತಿಗಳನ್ನು ಸಂಗ್ರಹಿಸು ವದು. ನಂತರ ಸಂಗ್ರಹಿಸಿದ ಸಂಗತಿಗಳನ್ನು ವ್ಯವಸ್ಥಿತ ರೀತಿಯಿಂದ ವರ್ಗೀ ಕರಿಸುವದು, ತರುವಾಯ ಇವುಗಳ ಆಧಾರದಿಂದ ಯೋಗ್ಯವಾದ ಸಿದ್ಧಾಂತ ಗಳನ್ನು ಕಂಡುಹಿಡಿಯುವದು.

ಪೌರನೀತಿಯು ಪರಿಪೂರ್ಣಾವಸ್ಥೆಯನ್ನು ಹೊಂದಿದ ಭೌತಿಕ ಮತ್ತು ರಸಾಯನಿಕ ಶಾಸ್ತ್ರಗಳಂತೆ ಇರುವದಿಲ್ಲ. ಏಕೆಂದರೆ ಇದರ ಸಿದ್ಧಾಂತಗಳನ್ನು ಮೇಲಿಂದ ಮೇಲೆ ಪರಿವರ್ತನೆಯನ್ನು ಹೊಂದುತ್ತಿರುವ ಮಾನವನ ಸ್ವಭಾವ ವನ್ನು ಅವಲೋಕಿಸಿ ಕಂಡುಹಿಡಿಯಬೇಕೇ ಹೊರತು, ಅವನ್ನು ಸಪ್ರಯೋಗ ವಾಗಿ ಸಿದ್ಧಮಾಡಲು ಬರುವಂತಿಲ್ಲ, ಅವು ಸಾಮಾಜಿಕ ಜೀವನದ ಒಲವು ಗಳ ದಿಗ್ದರ್ಶನವನ್ನು ಮಾಡುವದರಿಂದ ಅವುಗಳ ನಿರ್ಣಯಗಳು ತಾತ್ಕಾ ಲಿಕವಾಗಿರುತ್ತವೆ.

## ಪೌರನೀತಿಯ ಉಪಯುಕ್ತತೆ

(೧) ಪೌರನೀತಿಯ ಅಭ್ಯಾಸವು ಸಮಾಜದಲ್ಲಿಯ ಕೊಳೆಯನ್ನು ತೊಳೆದು ಹಾಕಲು ಸಹಾಯವಾಗುತ್ತದೆ. ಅಸ್ಪೃಶ್ಯತೆ, ನಿರಕ್ಷರತೆ, ಘೋಷಾ ಪದ್ಧತಿ, ಜಾತೀಯತೆಯ ವಿಷಮತೆ ಮುಂತಾದವುಗಳಿಂದಾಗುವ ಅನಾಹುತ ಗಳನ್ನು ಎತ್ತಿತೋರಿಸಿ ಅವುಗಳ ನಿವಾರಣೆಯ ಉಪಾಯಗಳನ್ನು ತಿಳಿಸಿ ಕೊಡುತ್ತದೆ. ಅದು ಭೂಲೋಕದಲ್ಲಿಯೇ ನಂದನವನ್ನು ನಿರ್ಮಿಸುತ್ತದೆ

ಅಂದರೆ ಅತಿಶಯೋಕ್ತಿಯಾಗಲಾರದು. (೨) ಅದು ಮಾನವನ ಭಾವನೆಗಳನ್ನು ಪರಿಶುದ್ಧಗೊಳಿಸಿ ಹೃದಯವನ್ನು ವಿಶಾಲಗೊಳಿಸುತ್ತದೆ. (೩) ವ್ಯಕ್ತಿಯು ಸಮಾಜದಲ್ಲಿಯ ಬೇರೆ ಬೇರೆ ಜನರ ಕೂಡ—ಹಿರಿಯರು ಅಧಿಕಾರಿಗಳು, ಗೆಳೆಯರು, ಕೆಳಗಿನವರು—ಹೇಗೆ ನಡೆದುಕೊಳ್ಳಬೇಕೆಂಬುದನ್ನು ತಿಳಿಸಿ ಹೇಳುತ್ತದೆ. (೪) ತರುಣರಿಗೆ ಅವರ ಸಾಮಾಜಿಕ ಹೊಣೆಗಾರಿಕೆಯ ಅರಿವನ್ನು ಮಾಡಿಕೊಟ್ಟು ಅವರು ದೇಶದ ಆಡಳಿತೆಯಲ್ಲಿ ಪ್ರತ್ಯಕ್ಷವಾದ ಭಾಗವಹಿಸಲು ಸುಸಜ್ಜರನ್ನಾಗಿ ಮಾಡುತ್ತದೆ.

## ಪೌರನೀತಿ ಮತ್ತು ಇತರ ಸಮಾಜ ಶಾಸ್ತ್ರಗಳು

ಎಲ್ಲ ಶಾಸ್ತ್ರಗಳೂ ಮಾನವನ ಜೀವನ ಕ್ರಮವನ್ನು ವಿವಿಧ ದೃಷ್ಟಿಕೋನಗಳಿಂದ ಪರಿಶೀಲಿಸುತ್ತವೆ. ಆದ್ದರಿಂದ ಇವು ಒಂದಕ್ಕೊಂದು ಅವಲಂಬಿಸಿ ಕೊಂಡಿರುತ್ತವೆ. ಒಂದನ್ನು ಇನ್ನೊಂದರಿಂದ ಸಂಪೂರ್ಣವಾಗಿ ಬೇರ್ಪಡಿಸಲು ಸಾಧ್ಯವಿಲ್ಲ. ಆದ್ದರಿಂದ ಈಗ ಪೌರನೀತಿಗೂ ಮತ್ತು ಇತರ ಸಮಾಜ ಶಾಸ್ತ್ರಗಳಿಗೂ ಇರುವ ಸಂಬಂಧವನ್ನು ತುಸು ವಿಚಾರಿಸುವಾ.

### ಪೌರನೀತಿ ಮತ್ತು ಇತಿಹಾಸ

ಇತಿಹಾಸವೆಂದರೆ ಮಾನವನ ಅನುಭವದ ಒಂದು ದೊಡ್ಡ ನಿಧಿ ಇದ್ದಂತೆ. ಅದು "ರಾಜರಾಣಿಯರ ಯುದ್ಧ ಶಾಂತಿಗಳ ಪಟ್ಟಿಯಲ್ಲ," ಮಾನವನು ಕಾಡುಪರಿಸ್ಥಿತಿಯಿಂದ ಸುಧಾರಿಸುತ್ತ, ಉಚ್ಚ ಸಂಸ್ಕೃತಿಯ ಮಟ್ಟವನ್ನು ಹೇಗೆ ಏರುತ್ತ ಬಂದಿದ್ದಾನೆಂಬುದನ್ನು ಇತಿಹಾಸವು ನಮಗೆ ತಿಳಿಸಿಕೊಡುತ್ತದೆ. ಮಾನವನ ಸಂಸ್ಕೃತಿಯ ಈ ಕಥೆಯು ಪೌರನೀತಿಯ ಅಭ್ಯಾಸಕ್ಕೆ ಬಹಳೇ ಸಹಾಯವನ್ನುಂಟುಮಾಡುತ್ತದೆ. ಸಂಘ ಸಂಸ್ಥೆಗಳು ಹಿಂದೆ ಹೇಗೆ ಇದ್ದವು? ಅವುಗಳಲ್ಲಿ ಕಾಲಕ್ರಮದಿಂಗ ಆದ ಮಾರ್ಪಾಟಗಳಾವು? ಇವೆಲ್ಲ ವಿಷಯುಗಳ ಜ್ಞಾನವು ನಮಗೆ ಇತಿಹಾಸದಿಂದ ಆಗುತ್ತದೆ. ಹೀಗೆ ಮಾನವನು ಭೂತಕಾಲದಲ್ಲಿ ಮಾಡಿದ ತಪ್ಪು ತಡೆಗಳನ್ನು ತೋರಿಸಿ, ಅವನಿಗೆ ಸರಿಯಾದ ಮಾರ್ಗಗಳನ್ನು ಅನುಸರಿಸಲು ಇತಿಹಾಸವು ತುಂಬಾ ಸಹಾಯವನ್ನು ನೀಡುತ್ತದೆ. ಮೇಲಾಗಿ ಸಂಘ ಸಂಸ್ಥೆಗಳು ಮುಂದೆ

ಯಾವ ದಿಶೆಯಲ್ಲಿ ಬದಲಾವಣೆಗಳನ್ನು ಹೊಂದಬಹುದೆಂಬುದನ್ನೂ ಇತಿಹಾಸವು ಸೂಚಿಸುತ್ತದೆ. ಹೀಗಾಗಿ ಇತಿಹಾಸದ ಪಾಠಗಳಿಂದ ಜೀವನವನ್ನು ಹೇಗೆ ಸುಖಮಯವನ್ನಾಗಿ ಮಾಡಿಕೊಳ್ಳಬಹುದು ಎಂಬುದನ್ನು ನಾವು ಕಲಿತುಕೊಳ್ಳುತ್ತೇವೆ.

**ಪೌರನೀತಿ ಮತ್ತು ಮನಃಶಾಸ್ತ್ರ**

ಪೌರನೀತಿಯು ಸಿದ್ಧಾಂತಗಳನ್ನು ಮೇಲಿಂದಮೇಲೆ ಪರಿವರ್ತನೆಯನ್ನು ಹೊಂದುತ್ತಿರುವ ಮಾನವನ ಸ್ವಭಾವವನ್ನು ಅವಲೋಕಿಸಿ ಕಂಡು ಹಿಡಿಯಬೇಕು ಎಂಬುದನ್ನು ಹಿಂದೆ ಹೇಳಿದೆ. ಮಾನವನ ಸ್ವಭಾವವು ಅವನ ಮನಸ್ಸಿನ ಪ್ರವೃತ್ತಿಯನ್ನು ಅವಲಂಬಿಸಿಕೊಂಡಿದೆ. ಅವನ ವಿವಿಧಚಟುವಟಿಕೆಗಳಿಗೂ ಮಾನಸಿಕ ಹಿನ್ನೆಲೆ ಇದ್ದೇ ಇದೆ. ಮನಃಶಾಸ್ತ್ರವು ಮಾನವನ ಚಟುವಟಿಕೆಗಳಿಗೆ ಮೂಲಭೂತವಾದ ಸಹಜ ಪ್ರವೃತ್ತಿಗಳ (ಭಯ ಕುತೂಹಲ, ಅನುಕರಣ, ಲೈಂಗಿಕ ಪ್ರವೃತ್ತಿ, ಸಂಗ್ರಹಿಸುವ ಪ್ರವೃತ್ತಿ ಮುಂತಾದವು.) ಜ್ಞಾನವನ್ನು ಒದಗಿಸಿ ಅವುಗಳನ್ನು ಹೇಗೆ ನಿಯಂತ್ರಿಸಿದರೆ ನಿಜವಾದ ಸಾಮಾಜಿಕ ಸೌಖ್ಯವು ಲಭಿಸುವದೆಂಬುದನ್ನು ತಿಳಿಸಿ ಹೇಳುತ್ತದೆ. ಮೇಲಾಗಿ ಇತ್ತೀಚೆಗೆ ಮನಃಶಾಸ್ತ್ರವು ಕೇವಲ ವ್ಯಕ್ತಿಯ ಮಾನಸಿಕ ಅಭ್ಯಾಸವನ್ನಷ್ಟೇ ಮಾಡುವದಲ್ಲದೆ ಗುಂಪಿನ(Group). ಮಾನಸಿಕ ಅಭ್ಯಾಸವನ್ನೂ ಮಾಡಲಾರಂಭಿಸಿದೆ. ಹೀಗೆ ವ್ಯಕ್ತಿ ಮತ್ತು ಸಮಾಜದ ಅಭ್ಯಾಸವೇ ಪ್ರಾಮುಖ್ಯವಾಗಿಯುಳ್ಳ ಪೌರನೀತಿಗೆ ವ್ಯಕ್ತಿ ಮತ್ತು ಗುಂಪಿನ ಮನೋನಿರೀಕ್ಷಣೆಯನ್ನು ಮಾಡುವ ಮನಃಶಾಸ್ತ್ರವು ಸಹಾಯವನ್ನುಂಟುಮಾಡುತ್ತದೆ.

**ಪೌರನೀತಿ ಮತ್ತು ಅರ್ಥಶಾಸ್ತ್ರ**

ಆರ್ಥಿಕ ಸ್ಥಿತಿಯು ತುಸುಮಟ್ಟಿಗಾದರೂ ಸಮಾಧಾನಕರವಿದ್ದರೆ ಮಾತ್ರ ಮಾನವನು ಬಾಳಿ ಜೀವನದ ಸೌಖ್ಯವನ್ನು ಕೊಂಚಮಟ್ಟಿಗಾದರೂ ಕಾಣಬಹುದು. ಅದು ಇಲ್ಲದೇ ಹೋದರೆ ಆವ ಕಲೆ ಸಂಸ್ಕೃತಿ ಸಾಹಿತ್ಯ ಮುಂತಾದವುಗಳು ಬಾಳಲಾರವು. ಹೀಗೆ ಪುರುಷಾರ್ಥಗಳಲ್ಲಿ ಮುಖ್ಯವಾದ ಅರ್ಥಶಾಸ್ತ್ರದ ಅಭ್ಯಾಸವು ಎಲ್ಲ ಶಾಸ್ತ್ರಗಳಿಗೂ ಸಹಾಯಕವಾಗಿರುತ್ತದೆ. ಮಾನವನ ಕೊರತೆ ಮತ್ತು ಅವನ್ನು ನೀಗಿಸುವ ಉಪಾಯಗಳನ್ನು ಅರ್ಥ

ಶಾಸ್ತ್ರವು ನಮಗೆ ತಿಳಿಸಿಕೊಡುತ್ತದೆ. ಇದಲ್ಲದೆ ಹಣದ ಉತ್ಪತ್ತಿ,ವಿನಿಯೋಗ, ಪದಾರ್ಥಗಳ ಬೆಲೆ ಮತ್ತು ವಿತರಣೆ ಮುಂತಾದ ವಿಷಯಗಳನ್ನು ಅರ್ಥ ಶಾಸ್ತ್ರವು ಅಭ್ಯಸಿಸುತ್ತದೆ. ಈ ಎಲ್ಲ ವಿಷಯಗಳ ಜ್ಞಾನದ ಉಪಯೋಗ ವನ್ನು ಮಾಡಿಕೊಂಡು ಮಾನವನ ಬಾಳನ್ನು ಸುಖಮಯವನ್ನಾಗಿ ಮಾಡಲು ಪೌರನೀತಿಯು ಹೆಣಗುತ್ತದೆ.

**ಪೌರನೀತಿ ಮತ್ತು ರಾಜನೀತಿಶಾಸ್ತ್ರ**

ರಾಜ ನೀತಿಶಾಸ್ತ್ರದಲ್ಲಿ ರಾಷ್ಟ್ರ, ಸರಕಾರ, ಸರಕಾರದ ಆಡಳಿತ, ರಾಜ ಕೀಯ ಸಂಘಸಂಸ್ಥೆ ಮುಂತಾದವುಗಳನ್ನು ಅಭ್ಯಸಿಸುತ್ತೇವೆ. ಅದರಂತೆ ಪೌರನೀತಿಯಲ್ಲಾದರೂ ಈ ವಿಷಯಗಳ ಅಭ್ಯಾಸವನ್ನು ಮಾಡುತ್ತೇವೆ. ಆದರೆ ಎರಡೂ ಶಾಸ್ತ್ರಗಳ ದೃಷ್ಟಿಕೋನಗಳು ಮಾತ್ರ ಬೇರೆ ಬೇರೆ ಇವೆ. ರಾಜನೀತಿ ಶಾಸ್ತ್ರದಲ್ಲಿ ವ್ಯಕ್ತಿಯ ಅಭ್ಯಾಸಕ್ಕಿಂತ ರಾಷ್ಟ್ರ ಮತ್ತು ಸರಕಾರ ಈ ವಿಷಯಗಳಿಗೆ ಹೆಚ್ಚು ಪ್ರಾಶಸ್ತ್ಯ. ಆದರೆ ಪೌರನೀತಿಯಲ್ಲಿ ನಾಗರಿಕನ ಹಕ್ಕು ಮತ್ತು ಕರ್ತವ್ಯಗಳಿಗೆ ಹೆಚ್ಚು ಮಹತ್ವ. ನೆರೆಹೊರೆಯ (Neighbourhood) ಸಮಸ್ಯೆಗಳ ಅಭ್ಯಾಸವು ಪೌರನೀತಿಯ ವೈಶಿಷ್ಟ್ಯ. ಪೌರನೀತಿಯು ಮಾನವನ ರಾಜಕೀಯ ಸಂಸ್ಥೆಗಳನ್ನಷ್ಟೇ ಅಭ್ಯಸಿಸದೆ ಸಾಮಾಜಿಕ, ಆರ್ಥಿಕ, ನೈತಿಕ, ಸಾಂಸ್ಕೃತಿಕ ಸಂಸ್ಥೆಗಳನ್ನೂ ಅಭ್ಯಾಸಿಸು ತ್ತದೆ. ಹೀಗಾಗಿ ಪೌರನೀತಿಯು ರಾಜನೀತಿಶಾಸ್ತ್ರದ ಸಂಪೂರ್ಣ ಉಪ ಯೋಗವನ್ನು ಮಾಡಿಕೊಂಡು ತನ್ಮೂಲಕ ವ್ಯಕ್ತಿಯ ಮತ್ತು ಸಮಾಜದ ಹಿತವನ್ನು ಸಾಧಿಸಲು ಯತ್ನಿಸುತ್ತದೆ.

**ಪೌರನೀತಿ ಮತ್ತು ನೀತಿಶಾಸ್ತ್ರ**

ನೀತಿಶಾಸ್ತ್ರವು ಯಾವದು ಸರಿ ಮತ್ತು ಯಾವದು ತಪ್ಪು, ಯಾವದು ಹಿತ ಮತ್ತು ಯಾವದು ಅನಿಷ್ಟ ಎಂಬ ವಿಷಯಗಳನ್ನು ವಿವೇಚಿಸುತ್ತದೆ. ಪೌರನೀತಿಯಾದರೂ ಮಾನವನ ಸರ್ವತೋಮುಖವಾದ ಏಳಿಗೆಯನ್ನು ಸಾಧಿಸಲು ಹೊರಟಿರುವದರಿಂದ ನೀತಿಶಾಸ್ತ್ರದ ಸಹಾಯವನ್ನು ಪಡೆಯು ತ್ತದೆ. ಆದರೆ ಇದರ ದೃಷ್ಟಿಕೋನವೇ ಭಿನ್ನವಾಗಿದೆ. ಇದು ಕೇವಲ ತಾತ್ವಿಕ (Theoretical) ವಿಚಾರವನ್ನು ಮಾಡದೆ, ಬಳಕೆಯಲ್ಲಿ ತರಬಹುದಾದ

ನೀತಿಶಾಸ್ತ್ರದ ತತ್ವಗಳನ್ನಷ್ಟೇ ಅಂಗೀಕರಿಸುತ್ತದೆ. ಹಿತಾಹಿತಗಳ ಬಗ್ಗೆ ನೀತಿಶಾಸ್ತ್ರಜ್ಞರಲ್ಲಿ ಸಾಮಾನ್ಯವಾಗಿ ಒಮ್ಮತವಿದ್ದ ಸಿದ್ಧಾಂತಗಳನ್ನಷ್ಟೇ ಅಂಗೀಕರಿಸಿ ಅವುಗಳ ಸಹಾಯದಿಂದ ಸಾಮಾಜಿಕ ಜೀವನದ ಮಟ್ಟನ್ನು ಸುಧಾರಿಸಲು ಹವಣಿಸುತ್ತದೆ. ಹೀಗೆ ನೀತಿಶಾಸ್ತ್ರ ಮತ್ತು ಪೌರನೀತಿಗೆ ನಿಕಟ ಸಂಬಂಧವಿದೆ.

ಈ ರೀತಿಯಾಗಿ ಪೌರನೀತಿಯು ಎಲ್ಲ ಶಾಸ್ತ್ರಗಳಿಂದ ಆಗುವ ಜ್ಞಾನ ವನ್ನು ಉಪಯೋಗಿಸಿಕೊಂಡು ಮಾನವನ ದೈಹಿಕ, ಮಾನಸಿಕ, ನೈತಿಕ, ಆರ್ಥಿಕ, ಸಾಂಸ್ಕೃತಿಕ—ಹೀಗೆ ಸರ್ವತೋಮುಖವಾದ ಏಳಿಗೆಯನ್ನು ಸಾಧಿಸಲು ಹೊರಟಿದೆ.

# ಅಧ್ಯಾಯ ೨

## ನಾಗರಿಕತೆ

### ನಾಗರಿಕನಾರು?

ಹಿಂದೆ ಹೇಳಿದಂತೆ ನಾಗರಿಕತೆಯ ಅಭ್ಯಾಸವೇ ಪೌರನೀತಿಯ ಮಹತ್ವದ ವಿಷಯ. ಈಗ ನಾಗರಿಕನಾರು ಎಂಬುದನ್ನು ತುಸು ಪರಿಶೀಲಿಸುವಾ.

ನಗರದಲ್ಲಿ ವಾಸಿಸುವ ಪ್ರತಿಯೊಬ್ಬನೂ ರೂಢಿಯಲ್ಲಿ ನಾಗರಿಕನೆನಿಸಿಕೊಂಡರೂ ಒಂದು ವಿಶಿಷ್ಟವಾದ ಅರ್ಥದಲ್ಲಿ ನಮಗೆ ಹಾಗೆ ಹೇಳಲಿಕ್ಕಾಗುವದಿಲ್ಲ. ಏಕೆಂದರೆ, ಪೌರನೀತಿಯಲ್ಲಿ ಹಳ್ಳಿಯ ನಿವಾಸಿಗಳಿಗೂ ನಾಗರಿಕರೆಂದು ಕರೆಯಲಾಗುತ್ತದೆ. ಪೂರ್ವಕಾಲದಲ್ಲಿ ಗ್ರೀಸದ *ನಗರ ದೇಶ (City State)ಗಳಲ್ಲಿ ವಾಸಮಾಡಿಕೊಂಡಿದ್ದು, ಅಲ್ಲಿಯ ಸರಕಾರದ ಆಡಳಿತೆಯಲ್ಲಿ ಭಾಗವಹಿಸುವವರಿಗೆಲ್ಲ ನಾಗರಿಕರೆಂಬ ಸಂಜ್ಞೆಯಿತ್ತು. ಇಂದಿಗೂ ಕೂಡ, ನಾಗರಿಕತೆಯ ಕಲ್ಪನೆಯು ವಿಸ್ತಾರ ಹೊಂದಿದ್ದರೂ ಅದರ ಸಾರಭೂತವಾದ ಅಂಶದಲ್ಲಿ ವಿಶೇಷವಾದ ಮಾರ್ಪಾಟು ಆಗಿಲ್ಲ. ಪುರಾತನ ಕಾಲದಲ್ಲಿ ಗುಲಾಮರಿಗೆ ನಾಗರಿಕತೆಯ ಹಕ್ಕುಗಳಿರಲಿಲ್ಲ. ಆದರೆ ಸುದೈವದಿಂದ ಗ್ರೀನೇ

---

*ಪ್ರಾಚೀನ ಕಾಲದಲ್ಲಿ ಗ್ರೀಸದ ಮೂಲನಿವಾಸಿಗಳಾದ ಆರ್ಯರು. ತಂಡ ವಿತಂಡವಾಗಿ ವಾಸಿಸುತ್ತಿದ್ದರು. ಆದರೆ ಇದರಿಂದ ಅವರಿಗೆ ಪರಕೀಯ ದಾಳಿಗಳ ಭೀತಿಯು ಹೆಚ್ಚಾಗತೊಡಗಿತು. ಇದನ್ನು ತಪ್ಪಿಸುವದಕ್ಕಾಗಿ ಗುಡ್ಡದ ಓರೆಗಳಲ್ಲಿ ಮತ್ತು ಗೋಡೆಗಳಿಂದ ಸುತ್ತುಗಟ್ಟಿದ ಪಟ್ಟಣಗಳಲ್ಲಿ ವಾಸಿಸುವದು ವಿಹಿತವೆಂದು ಅವರಿಗೆ ಅನಿಸಹತ್ತಿತು. ಇದರಿಂದ ಈ ಜನರಲ್ಲಿ ಪ್ರಗತಿಯು ಭರದಿಂದ ಸಾಗಿತು. ಈ ನಗರ ದೇಶದಲ್ಲಿ ವಾಸಿಸುವ ಪ್ರತಿಯೊಬ್ಬನು ರಾಜಕಾರಣದಲ್ಲಿ ಆಸ್ಥೆಯಿಂದ ಭಾಗವಹಿಸುತ್ತಿದ್ದನು. ಅವನು ಎಲ್ಲ ಶಾಸನ ಸಭೆಗಳಿಗೆ ಹಾಜರ ಇದ್ದು ತನ್ನ ವೈಯಕ್ತಿಕ ಅಭಿಪ್ರಾಯವನ್ನು ಮುಂಡಿಸುತ್ತಿದ್ದನು. ಹೀಗೆ ಎಲ್ಲರೂ ತಮ್ಮ ನಗರ ದೇಶದ ಎಲ್ಲ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರಿಂದ ಅವರಲ್ಲಿ ರಾಜಕೀಯ ಜಾಗ್ರತಿಯಾಗಿ ಎಲ್ಲ ಕಲೆಗಳಲ್ಲಿ ಸಾಹಿತ್ಯದಲ್ಲಿ ಅವರು ಜಗತ್ತನ್ನೇ ಅಚ್ಚರಿಗೊಳಿಸುವಷ್ಟು ಪ್ರಗತಿಯನ್ನು ಹೊಂದಿದರು. ಇಲ್ಲಿಯೇ ಪೌರನೀತಿಯ ಉಗಮವಾಯಿತು.

ಶತಮಾನದ ಮಧ್ಯಕಾಲದಿಂದ ದಾಸ್ಯತ್ವದ ಪದ್ಧತಿಯು ಪೂರ್ಣವಾಗಿ ಅಳಿದು ಹೋದುದರಿಂದ ಈಗ ಸರ್ವರಿಗೂ ಯಾವ ಭೇದವಿಲ್ಲದೆ ನಾಗರಿಕತೆಯ ಹಕ್ಕುಗಳು ದೊರೆಯಹತ್ತಿವೆ. ಈಗಿನ ನಾಗರಿಕತೆಯ ಕಲ್ಪನೆಯಲ್ಲಿ ಸ್ತ್ರೀ ಪುರುಷರೆಂಬ ಭೇದಭಾವವಾಗಲಿ, ಸ್ವಾಮಿ-ಸೇವಕವೆಂಬ ವೈಷಮ್ಯವಾಗಲೀ ಅಥವಾ ಪಟ್ಟಣಿಗ ಮತ್ತು ಹಳ್ಳಿಯವ ಎಂಬ ಪಂಕ್ತಿಪ್ರಪಂಚವಾಗಲೀ ಸಂಪೂರ್ಣವಾಗಿ ಮಾಯವಾಗಿವೆ. ಯಾವನಲ್ಲಿ ನಾಗರಿಕತೆಯ ಲಕ್ಷಣಗಳೆಲ್ಲವೂ ಇವೆಯೋ ಅವನು ನಾಗರಿಕನೆಂದೆನಿಕೊಳ್ಳುವದರಲ್ಲಿ ಯಾವ ಆತಂಕವೂ ಇಲ್ಲದಾಗಿದೆ. ಆಧುನಿಕ ನಾಗರಿಕತೆಯ ಕಲ್ಪನೆಯ ಮೇರೆಗೆ (೧) ನಾಗರಿಕನು ಒಂದು ವಿಶಿಷ್ಟವಾದ ಪ್ರದೇಶದಲ್ಲಿ ವಾಸಿಸುತ್ತಾನೆ. (೨) ಸರಕಾರವು ಅವನಿಗೆ ಕೆಲವು ಹಕ್ಕುಗಳನ್ನು ನೀಡುತ್ತದೆ. (೩) ಆ ಹಕ್ಕುಗಳಉಪಯೋಗಕ್ಕೆ ಪ್ರತಿಯಾಗಿ ಅವನು ಕೆಲವು ವಿಶಿಷ್ಟವಾದ ಕರ್ತವ್ಯಗಳನ್ನು ಪಾಲಿಸಬೇಕಾಗುತ್ತದೆ. ಹಾಗೂ ಸರಕಾರಕ್ಕೆ ನಿಷ್ಠನಾಗಿರಬೇಕಾಗುತ್ತದೆ. (೪) ಕೊನೆಯದಾಗಿ ಎಲ್ಲಕ್ಕೂ ಮಹತ್ವದ ಅಂಶವೆಂದರೆ ಆತನು ರಾಷ್ಟ್ರದ ಸರಕಾರದ ಆಡಳಿತೆಯಲ್ಲಿ ಆಸ್ಥೆಯಿಂದ ಸಹಕರಿಸಬೇಕಾಗುತ್ತದೆ. ಯಾವನಲ್ಲಿ ಈ ನಾಲ್ಕು ಅಂಶಗಳುಇರುವದಿಲ್ಲವೋ ಅವನು ನಾಗರಿಕನಾಗನು.

**ನಾಗರಿಕತೆಯ ಪ್ರಭೇದಗಳು**

ನಾಗರಿಕತೆಯಲ್ಲಿ (೧) ಮೂಲಭೂತ (Natural) ನಾಗರಿಕತೆ ಮತ್ತು (೨) ಸಾಧಿತ (Naturalised) ನಾಗರಿಕತೆ ಎಂಬ ಎರಡು ಮುಖ್ಯವಾದ ಪ್ರಭೇದಗಳು. ಮೂಲಭೂತ ನಾಗಕರಿತೆಯು ರಕ್ತಸಂಬಂಧ ಇಲ್ಲವೆ ಜನ್ಮ ಸ್ಥಳವನ್ನು ಅವಲಂಬಿಸಿರುತ್ತದೆ. ಮೊದಲನೆಯ ತತ್ವದ ಮೇರೆಗೆ ಮಕ್ಕಳು ತಮ್ಮ ತಾಯಿ ತಂದೆಗಳ ನಾಗರಿಕತೆಯನ್ನು ಪಡೆಯುತ್ತಾರೆ. ಎಂದರೆ ಅವರು ಯಾವ ಪ್ರದೇಶದಲ್ಲಿಯೇ ಜನಿಸಲಿ, ತಮ್ಮ ತಂದೆ ತಾಯಿಗಳು ಯಾವ ದೇಶದ ನಾಗರಿಕರಿರುವರೋ ಅವರಾದರೂ (ಮಕ್ಕಳು) ಅದೇ ದೇಶದ ನಾಗರಿಕರಾಗುತ್ತಾರೆ. ಈ ತತ್ವವು ಇಟಲಿ, ಆಸ್ಟ್ರೇಲಿಯಾ ಮತ್ತು ಫ್ರಾನ್ಸ ದೇಶದಲ್ಲಿ ಅಸ್ತಿತ್ವದಲ್ಲಿದೆ. ಎರಡನೆಯ ತತ್ವದ ಮೇರೆಗೆ ಒಂದು ವಿಶಿಷ್ಟವಾದ ಪ್ರದೇಶದಲ್ಲಿ ಜನಿಸಿರುವವರೆಲ್ಲರೂ ಆ ದೇಶದ ನಾಗರಿಕರಾಗುವರು, ಅವರ ನಾಗರಿಕತೆಯು ಅವರ ಜನ್ಮಸ್ಥಳವನ್ನು ಅವ

ಲಂಬಿಸಿರುತ್ತದೆ. ಈ ತತ್ವವನ್ನು ಅರ್ಜೆಂಟಾಯಿನ್ ದೇಶ ಮತ್ತು ಕೆಲವು ಇನ್ನಿತರ ದೇಶಗಳು ಒಪ್ಪಿವೆ. ಆದರೆ ಇಂಗ್ಲಂಡ ಮತ್ತು ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು ಎರಡೂ ತತ್ವಗಳನ್ನು ಏಕಕಾಲಕ್ಕೆ ಅನುಸರಿಸುತ್ತವೆ. ಪರನಾಡಿಗರ ವಿಷಯದಲ್ಲಿ ಜನ್ಮಸ್ಥಳದ ತತ್ವವನ್ನೂ, ನಮ್ಮ ನಾಡಿಗರ ವಿಷಯದಲ್ಲಿ ರಕ್ತಸಂಬಂಧದ ತತ್ವವನ್ನೂ ಉಪಯೋಗಿಸಿಕೊಳ್ಳುತ್ತವೆ. ಎಂದರೆ ಪರನಾಡಿಗರು ತಮ್ಮ ನಾಡಿನಲ್ಲಿ ವಾಸಿಸಿರುವಾಗ ಅವರಿಗೆ ಮಕ್ಕಳು ಜನಿಸಿದರೆ, ಆ ಮಕ್ಕಳು ತಮ್ಮ ದೇಶದಲ್ಲಿ ಜನಿಸಿದ ಕಾರಣ ಅವರು ತಮ್ಮ ದೇಶದ ನಾಗರಿಕರೆಂದೇ ಹೇಳಲಾಗುತ್ತದೆ. ಆದರೆ ತಮ್ಮ ದೇಶದವರು ಬೇರೆ ದೇಶಗಳಲ್ಲಿ ನೆಲೆಸಿರುವಾಗ ಅವರಿಗೆ ಮಕ್ಕಳು ಹುಟ್ಟಿದರೆ ಅವರಿಗೆ ರಕ್ತಸಂಬಂಧದ ತತ್ವದ ಮೇರೆಗೆ ತಮ್ಮ ದೇಶದ ನಾಗರಿಕರೆಂದು ಸಂಬೋಧಿಸಲಾಗುತ್ತವೆ. ಒಂದೊಂದು ಸಲ ಒಂದು ವಿಚಿತ್ರವಾದ ಪರಿಸ್ಥಿತಿಯು ಉಂಟಾಗಬಹುದು. ಇಂಗ್ಲಂಡ ದೇಶದ ದಂಪತಿಗಳು ಅರ್ಜಂಟಾಯಿನ್‌ದಲ್ಲಿ ವಾಸಿಸಿದ್ದಾರೆಂದು ತಿಳಿಯುವಾ. ಅವರು ಅಲ್ಲಿ ನೆಲೆಸಿರುವಾಗ ಅವರಿಗೆ ಮಕ್ಕಳು ಜನಿಸಿದರೆ ಆ ಮಕ್ಕಳು ಅರ್ಜಂಟಾಯಿನ್ ದೇಶವು ಒಪ್ಪಿದ ಜನ್ಮಸ್ಥಳದ ತತ್ವದ ಮೇರೆಗೆ ಆ ದೇಶದ ನಾಗರಿಕರಾಗುವರು. ಆದರೆ ಇಂಗ್ಲಂಡವು ತನ್ನ ನಾಡಿಗರ ವಿಷಯದಲ್ಲಿ ಅಂಗೀಕರಿಸಿದ ರಕ್ತಸಂಬಂಧದ ತತ್ವಾನುಸಾರವಾಗಿ ಅವರು ಇಂಗ್ಲಂಡದ ನಾಗರಿಕರಾಗುವರು. ಹೀಗೆ ಏಕಕಾಲಕ್ಕೆ ಎರಡು ದೇಶಗಳ ನಾಗರಿಕತೆಯು ಲಭಿಸಿದಾಗ ಒಂದು ದೇಶದ ನಾಗರಿಕತೆಗೆ ಶರಣು ಹೊಡೆಯಬೇಕಾಗುವದು. ಏಕೆಂದರೆ, ಏಕಕಾಲಕ್ಕೆ ಒಬ್ಬನು ಎರಡು ಇಲ್ಲವೇ ಹೆಚ್ಚು ದೇಶಗಳ ನಾಗರಿಕನಾಗಲಾರನು.

ಭಾರತ ರಾಜ್ಯಘಟನೆಯಲ್ಲಿ ನಾಗರಿಕತೆಯ ಬಗ್ಗೆ ಕೆಳಗಿನಂತೆ ಹೇಳಲಾಗಿದೆ.

(ಅ) (೧) ಯಾರು ಅಥವಾ ಯಾರ ತಂದೆ ಇಲ್ಲವೆ ತಾಯಿ ಭಾರತದ ಕ್ಷೇತ್ರದಲ್ಲಿ ಜನಿಸಿರುವರೋ ಅಥವಾ ಯಾರು ಹೊಸ ರಾಜ್ಯಘಟನೆ ಅಸ್ತಿತ್ವದಲ್ಲಿ ಬರುವ ಪೂರ್ವದಲ್ಲಿ ೫ ವರುಷ ಭಾರತದ ಕ್ಷೇತ್ರದಲ್ಲಿ ವಾಸಿಸಿರುವರೋ ಮತ್ತು—

(ಅ) ಯಾರು ಹೊಸ ರಾಜ್ಯಘಟನೆ ಜಾರಿಯಲ್ಲಿ ಬರುವಾಗ ಭಾರತದ ಕ್ಷೇತ್ರದಲ್ಲಿ ವಾಸಮಾಡಿಕೊಂಡಿರುವರೋ— ಅವರೆಲ್ಲರೂ ಭಾರತದ ನಾಗರಿಕರು.

(ಬ) ಪಾಕಿಸ್ತಾನದಿಂದ ಬಂದ ಕೆಳಗಿನ ಜನರೂ ಭಾರತದ ನಾಗರಿಕರು.

(೧) ಯಾರು ಅಥವಾ ಯಾರ ತಂದೆ ಇಲ್ಲವೆ ತಾಯಿ, ಅಜ್ಜ ಇಲ್ಲವೇ ಅಜ್ಜಿ ೧೯೩೫ನೇ ಕಾಯ್ದೆಯಲ್ಲಿ ವಿವರಿಸಿದ ಹಿಂದುಸ್ತಾನದಲ್ಲಿ ಜನಿಸಿರುವರೋ ಮತ್ತು—

(೨) ಯಾರು ೧೯-೭-೧೯೪೮ಕ್ಕಿಂತ ಪೂರ್ವದಲ್ಲಿ ಭಾರತಕ್ಕೆ ಬಂದು ಅಲ್ಲಿಯೇ ವಾಸ ಮಾಡಿಕೊಂಡಿರುವರೋ ಅಥವಾ ಯಾರು ೧೯-೭-೧೯೪೮ರ ಅಥವಾ ಅದರ ನಂತರ ಬಂದಿದ್ದರೆ ಯಾರ ಹೆಸರು ಆ ಬಗ್ಗೆ ನಿಯಮಿಸಲ್ಪಟ್ಟ ಸರಕಾರೀ ಕಾಮದಾರನಿಂದ ನೊಂದಾಯಿಸಲ್ಪಟ್ಟಿರುವದೋ ( ಅರ್ಜಿ ಕೊಡುವ ದಿನಾಂಕಕ್ಕಿಂತ ಮೊದಲು ಆರು ತಿಂಗಳು ಸತತವಾಗಿ ಭಾರತದ ಕ್ಷೇತ್ರದಲ್ಲಿ ವಾಸಮಾಡಿಕೊಂಡಿರದವರ ಹೆಸರು ನೋಂದಾಯಿಸಲ್ಪಡುವದಿಲ್ಲ.) ಇವರೆಲ್ಲರೂ ಭಾರತದ ನಾಗರಿಕರು.

(ಕ) ಇದಲ್ಲದೇ ಭಾರತದ ಕ್ಷೇತ್ರವನ್ನೇ ಬಿಟ್ಟು ಪರದೇಶಗಳಲ್ಲಿ ವಾಸ ಮಾಡಿಕೊಂಡಿರುವ, ಆದರೆ ಭಾರತೀಯರ ರಕ್ತಸಂಬಂಧವುಳ್ಳ ಕೆಳಗಿನ ಜನರೂ ಭಾರತದ ನಾಗರಿಕರು.

(೧) ಯಾರು ಅಥವಾ ಯಾರ ತಂದೆ ಅಥವಾ ತಾಯಿ, ಅಜ್ಜ ಇಲ್ಲವೇ ಅಜ್ಜಿ, ಅಖಂಡ ಹಿಂದುಸ್ತಾನದ ಕ್ಷೇತ್ರದಲ್ಲಿ ಜನಿಸಿರುವರೋ ಮತ್ತು

(೨) ಯಾರು ಭಾರತದ ನಾಗರಿಕರೆಂದು ತಾವು ವಾಸ ಮಾಡಿಕೊಂಡಿದ್ದ ರಾಷ್ಟ್ರಗಳಲ್ಲಿ ಭಾರತದ ರಾಯಭಾರಿಗಳಿಂದ ನೋಂದಾಯಿಸಲ್ಪಟ್ಟಿರುವರೋ ಇವರೆಲ್ಲರೂ ಭಾರತದ ನಾಗರಿಕರು.

ಪರರಾಷ್ಟ್ರದ ನಾಗರಿಕತೆಯನ್ನು ಸ್ವಂತ ಇಚ್ಛೆಯ ಮೇರೆಗೆ ಸ್ವೀಕರಿಸಿದ ಯಾವ ಮನುಷ್ಯನೂ ಭಾರತದ ನಾಗರಿಕನಾಗಿ ಉಳಿಯಲಾರನು.

**ಹೀಗೆ ನಾಗರಿಕತೆಯು ಜನ್ಮ, ರಕ್ತಸಂಬಂಧ ಮತ್ತು ವಾಸಸ್ಥಳವನ್ನವಲಂಬಿಸಿದೆ.**

## ನಾಗರಿಕತೆಯನ್ನು ಸಂಪಾದಿಸುವ ರೀತಿ

(೧) ವಾಸಸ್ಥಳ:—ಸುಸ್ವಭಾವಿಯಾದ ಪರನಾಡಿಗನು ಒಂದು ನಗರ ದೇಶದಲ್ಲಿ ಆ ದೇಶದ ಕಾನೂನಿನಿಂದ ವಿಧಿಸಿದ ಅವಧಿಯವರೆಗೆ (ಸಾಮಾನ್ಯವಾಗಿ ೫ ವರುಷ—) ವಾಸಿಸಿ ಆ ದೇಶದ ನಾಗರಿಕತೆಯನ್ನು ಪಡೆಯುದನು. ಆದರೆ ಆತನು ತನ್ನ ಪೂರ್ವದೇಶದ ನಾಗರಿಕತೆಯನ್ನು ಬಿಟ್ಟುಕೊಡಬೇಕಾಗುವದು.

(೨) ವಿವಾಹ:— ಸ್ತ್ರೀಯು ಬೇರೆ ದೇಶದವನನ್ನು ಲಗ್ನವಾದರೆ ಅವಳು ತನ್ನ ಪತಿಯ ದೇಶದ ನಾಗರಿಕತೆಯನ್ನು ಪಡೆಯುವಳು.

(೩) ಸರಕಾರೀ ನೌಕರಿ:— ಪರನಾಡಿಗನು ಬೇರೊಂದು ದೇಶದಲ್ಲಿ ಸರಕಾರೀ ನೌಕರಿಯನ್ನು ಹಿಡಿದರೆ ಅವನು ಆ ದೇಶದ ನಾಗರಿಕನಾಗುವನು.

(೪) ಆಸ್ತಿಯ ಸಂಪಾದನೆ:— ಪೇರು ಮತ್ತು ಮೆಕ್ಸಿಕೋ ಮುಂತಾದ ರಾಷ್ಟ್ರಗಳಲ್ಲಿ ಸಾಕಷ್ಟು ಆಸ್ತಿಯನ್ನು ಸಂಪಾದಿಸಿದರೆ ಆ ವ್ಯಕ್ತಿಯು ಆ ದೇಶದ ನಾಗರಿಕತೆಯನ್ನು ಪಡೆಯುತ್ತಾನೆ.

(೫) ದತ್ತಕ: - ದತ್ತಕ ಮಗನು ತನ್ನ ದತ್ತಕ ತಂದೆಯ ನಾಗರಿಕತೆಯನ್ನು ಪಡೆಯುವನು.

ಸಾಮಾನ್ಯವಾಗಿ, ನಾಗರಿಕತೆಯನ್ನು ಸಂಪಾದಿಸಿದವರಾದರೂ ನೈಜವಾದ ನಾಗರಿಕರಿಗಿದ್ದ ಹಕ್ಕುಗಳನ್ನೇ ಉಪಭೋಗಿಸುತ್ತಾರೆ. ಆದರೆ ಕೆಲವೊಂದು ದೇಶಗಳಲ್ಲಿ ನಾಗರಿಕತೆಯನ್ನು ಸಂಪಾದಿಸಿದವರ ಮೇಲೆ ಕೆಲವು ನಿರ್ಬಂಧಗಳಿರುತ್ತವೆ. ಉದಾ:—ಅಮೇರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ನಾಗರಿಕತೆಯನ್ನು ಸಂಪಾದಿಸಿದವನು ಅಧ್ಯಕ್ಷನಾಗಲಾರನು.

## ನಾಗರಿಕತೆಯನ್ನು ಕೆಳಗೆ ತೋರಿಸಿದ ರೀತಿಯಲ್ಲಿ ಕಳೆದುಕೊಳ್ಳಬಹುದು

(೧) ಒಂದು ದೇಶದ ನಾಗರಿಕತೆಗೆ ಶರಣು ಹೊಡೆದು ಇನ್ನೊಂದು ದೇಶದ ನಾಗರಿಕತೆಯನ್ನು ಸ್ವೀಕರಿಸಿದರೆ ಆ ಮನುಷ್ಯನು ,ಮೊದಲಿನ ದೇಶದ ನಾಗರಿಕತೆಯನ್ನು ಕಳೆದುಕೊಳ್ಳುತ್ತಾನೆ.

(೨) ಸ್ತ್ರೀಯು ಪರದೇಶಿಗನೊಡನೆ ಲಗ್ನವಾದರೆ ಪೂರ್ವದೇಶದ ನಾಗರಿಕತೆಯನ್ನು ಕಳೆದುಕೊಳ್ಳುತ್ತಾಳೆ.

(೩) ಒಬ್ಬನು ಬೇರೆ ದೇಶದಲ್ಲಿ ಸರಕಾರೀ ನೌಕರಿಯನ್ನು ಹಿಡಿದರೆ ಪೂರ್ವದೇಶದ ನಾಗರಿಕತೆಯನ್ನು ಕಳೆದುಕೊಳ್ಳುತ್ತಾನೆ.

(೪) ಸೈನ್ಯದಿಂದ ತಪ್ಪಿಸಿಕೊಂಡು ಬಂದರೆ ನಾಗರಿಕತೆ ಇಲ್ಲದಾಗುವದು.

(೫) ಮಾತೃಭೂಮಿಯಿಂದ ಬಹುಕಾಲದವರೆಗೆ ದೂರ ಉಳಿದರೆ ಒಂದೊಂದು ಸಲ ನಾಗರಿಕತೆಯು ಹೋಗುವದು.

(೬) ದೊಡ್ಡ ಅಪರಾಧಗಳಿಗಾಗಿ ಶಿಕ್ಷೆಯಾದರೂ ನಾಗರಿಕತೆ ಇಲ್ಲವಾಗುವದು.

(೭) ಬೇರೆ ದೇಶದಲ್ಲಿ ನಾಗರಿಕತೆಯನ್ನು ಸಂಪಾದಿಸಿದರೆ ಮೂಲ ದೇಶದ ನಾಗರಿಕತೆಯು ಹೋಗುವದು.

ಉತ್ತಮನಾದ ನಾಗರಿಕನಲ್ಲಿ ಬುದ್ಧಿ, ಧೂರ್ತತನ, ಆತ್ಮಸಂಯಮ, ರಾಜನಿಷ್ಠೆ. ಸಾರ್ವಜನಿಕ ಕಾರ್ಯತತ್ಪರತೆ,-ಪ್ರಾಮಾಣಿಕತೆ, ನಿರ್ಭಯತೆ, ಮತ್ತು ಎಲ್ಲಕ್ಕೂ ಮುಖ್ಯವಾಗಿ ಸ್ವಾರ್ಥತ್ಯಾಗ ಬುದ್ಧಿಯಿಂದ ಸಮಾಜಕ್ಕಾಗಿ ದುಡಿಯುವದು, ಇವೇ ಮುಂತಾದ ಗುಣಗಳು ಕಂಡುಬರುತ್ತವೆ.

**ನಾಗರಿಕನು ಮತ್ತು ಪರನಾಡಿಗನು** (Alien)

ನಾಗರಿಕನು ನಗರದೇಶದ ನಿವಾಸಿಯಾಗಿದ್ದು ಲೌಕಿಕ (Civil) ಮತ್ತು ರಾಜಕೀಯ (Political) ಹಕ್ಕುಗಳನ್ನು ಪಡೆದಿರುತ್ತಾನೆ. ಮತ್ತು ಸರಕಾರಕ್ಕೆ ನಿಷ್ಠನಾಗಿದ್ದು ಸರಕಾರದ ಆಡಳಿತೆಯಲ್ಲಿ ಭಾಗವಹಿಸುತ್ತಾನೆ. ಆದರೆ ಪರನಾಡಿಗನು ಆ ಪ್ರದೇಶದಲ್ಲಿ ಕೆಲಕಾಲಮಾತ್ರ ವಾಸಿಸುತ್ತಾನೆ. ಆತನು ಲೌಕಿಕ ಹಕ್ಕುಗಳನ್ನಷ್ಟೇ ಉಪಭೋಗಿಸುತ್ತಾನೆ. ಆತನಿಗೆ ರಾಜಕೀಯ ಹಕ್ಕುಗಳಿರುವದಿಲ್ಲ. ಆದರೂ ಆತನು ಸರಕಾರಕ್ಕೆ ನಿಷ್ಠನಾಗಿರುತ್ತಾನೆ. ಮತ್ತು ತೆರಿಗೆಯನ್ನು ಕೊಡುತ್ತಾನೆ.

## ನಾಗರಿಕತೆಯ ಶಿಕ್ಷಣ

ನಾಗರಿಕ ಜೀವನದಲ್ಲಿ ಶಿಕ್ಷಣದ ಸ್ಥಾನವು ಅತ್ಯಂತ ಮಹತ್ವದ್ದು. ಶಿಕ್ಷಣದಿಂದಲೇ ನಾಗರಿಕನ ಕರ್ತವ್ಯಗಳನ್ನು ಸರಿಯಾಗಿ ನೆರವೇರಿಸಲು ಬೇಕಾಗುವ ಜ್ಞಾನ ಮತ್ತು ಅನುಭವಗಳು ಲಭಿಸುತ್ತವೆ. ಮನುಷ್ಯನ ಜೀವನಕ್ಕೆ ಸರಿಹೋಗುವಂತೆ ಶಿಕ್ಷಣವು ತ್ರಿವಿಧವಿರುತ್ತದೆ. ಔದ್ಯೋಗಿಕ, ಸಾಮಾಜಿಕ, ಮತ್ತು ಆಧ್ಯಾತ್ಮಿಕ. ಪ್ರತಿಯೊಬ್ಬ ವ್ಯಕ್ತಿಯು ತನ್ನ ವ್ಯಕ್ತಿತ್ವದ ಸಂಪೂರ್ಣವಾದ ವಿಕಾಸವನ್ನು ಮಾಡಿಕೊಂಡು ಮಾದರಿಯ ನಾಗರಿಕನಾಗಿ ತನ್ನ ಉಪಜೀವಿಕೆಯನ್ನು ನಾಗಿಸಲು ಸಮರ್ಥನಾಗಿ ಆಗುವಂತೆ ಮಾಡುವದೇ ಶಿಕ್ಷಣದ ನಿಜವಾದ ಗುರಿಯು. ಶಾರೀರಿಕ ಮತ್ತು ಮಾನಸಿಕ ಶಕ್ತಿಗಳ ಬೆಳವಣಿಗೆಯೊಂದಿಗೆ ನೈತಿಕ ಮತ್ತು ಆಧ್ಯಾತ್ಮಿಕ ಶಕ್ತಿಗಳು ಬೆಳೆದು ಮನುಷ್ಯನು ತನ್ನ ಸಾಮಾಜಿಕ ಕರ್ತವ್ಯಗಳನ್ನು ಸಮಾಧಾನಕರವಾಗಿ ನೆರವೇರಿಸಲು ಸಮರ್ಥನಾಗಬೇಕು. ವ್ಯಕ್ತಿಯ ನಿಜವಾದ ಸಾಂಸ್ಕೃತಿಕ ವಿಕಾಸವು ಸಮಾಜಕ್ಕೆ ಎಂದೂ ವಿಘಾತಕವಾಗಲಾರದು. ಸ್ವಲ್ಪದರಲ್ಲಿ ಹೇಳಬೇಕಾದರೆ ಶಿಕ್ಷಣವು ಉಪಜೀವಿಕೆಯ ಸಂಪಾದನೆ, ಉತ್ತಮ ನಾಗರಿಕತೆ ಮತ್ತು ವ್ಯಕ್ತಿತ್ವದ ವಿಕಾಸ ಇವುಗಳ ತ್ರಿವೇಣೀಸಂಗಮವು.

ಹುಟ್ಟಿದಾರಭ್ಯ ಯಾರೂ ಉತ್ತಮ ನಾಗರಿಕರಾಗುವದಿಲ್ಲ ಆದರೆ ಪ್ರತಿಯೊಬ್ಬನು ಸ್ವಪ್ರಯತ್ನದಿಂದ ಉತ್ತಮ ನಾಗರಿಕನಾಗಬೇಕಾಗುವದು. ಇದಕ್ಕಾಗಿ ಪೌರನೀತಿಯ ಅಭ್ಯಾಸವು ಎಷ್ಟು ಮಹತ್ವದ್ದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಪೌರನೀತಿಯಿಂದ ಮನುಷ್ಯನಿಗೆ ರಾಷ್ಟ್ರ ಮತ್ತು ಆದರ ಕರ್ತವ್ಯಗಳು, ಸ್ಥಾನಿಕಸ್ವರಾಜ್ಯ, ಸಾಮಾಜಿಕ ಸಂಸ್ಥೆಗಳು, ನಾಗರಿಕನ ಹಕ್ಕುಗಳು ಮತ್ತು ಕರ್ತವ್ಯಗಳು ಇವೇ ಮುಂತಾದ ವಿಷಯಗಳ ಜ್ಞಾನವು ಉಂಟಾಗುತ್ತದೆ. ಆದರೆ ಈ ಜ್ಞಾನವಷ್ಟೇ ಸಾಲದು ಈ ಜ್ಞಾನಬಲದಿಂದ ತಾನು ಸಾಧಿಸಬೇಕಾದ ಗುರಿಯ ಸ್ಪಷ್ಟವಾದ ಕಲ್ಪನೆಯೂ ಅವನಿಗಿರಬೇಕು. ಇವೆರಡರಿಂದಲೂ ಸಹ ಒಬ್ಬ ವ್ಯಕ್ತಿಯು ಉತ್ತಮ ನಾಗರಿಕನಾಗಲಾರನು.

ಕೇವಲ ತನ್ನ ಹಕ್ಕು ಹಾಗೂ ಕರ್ತವ್ಯಗಳನ್ನು ಅರಿತ ಮಾತ್ರಕ್ಕೆ ಆತನು ಉತ್ತಮ ನಾಗರಿಕನಾಗಲಾರನೆಂಬುದನ್ನು ಮೇಲೆ ಹೇಳಿದೆ ಹಾಗಾದರೆ ಉತ್ತಮ ನಾಗರಿಕರು ಹೇಗಾಗುವರು ಎಂಬುದನ್ನು ನೋಡುವಾ.

ನಾಗರಿಕತೆಯ ಶಿಕ್ಷಣವು ನಮ್ಮ ಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಸಿಗುತ್ತದೆ. ಮೊದಲು ನಾಗರಿಕತೆಯ ಶಿಕ್ಷಣವು ಕುಟುಂಬದಲ್ಲಿ ಸಿಗುತ್ತದೆ. ತಾಯಿಯು ಮಗುವಿನ ವಿಷಯದಲ್ಲಿ ತೋರಿಸುವ ಪ್ರೀತಿ ಹಾಗೂ ತ್ಯಾಗ ಬುದ್ಧಿಗಳು ಮಗುವಿನಲ್ಲಿ ಬೇರೂರಿ ಆ ಎಳೆಯ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮ ವನ್ನು ಉಂಟುಮಾಡುತ್ತದೆ. "೩ ವರ್ಷದ ಬುದ್ಧಿ ೧೦೦ ವರ್ಷದವರೆಗೆ" ಎಂಬ ಮಾತಿನ ಇತ್ಯರ್ಥವು ಇಲ್ಲಿ ಆಗುವದು. ಕುಟುಂಬದ ತರುವಾಯ ನಾಗರಿಕ ಶಿಕ್ಷಣವನ್ನು ಕೊಡುವ ಸಂಸ್ಥೆಗಳೆಂದರೆ ಮುಖ್ಯವಾಗಿ ಶಿಶುವಿಹಾರ. ಶಾಲೆ, ಕಾಲೇಜು, ವಿದ್ಯಾಲಯ, ಕ್ಲಬ್ಬು, ಆಟದ ಬೈಲು, ಅನೇಕ ರಾಜ ಕೀಯ ಮತ್ತು ಸಾಮಾಜಿಕ ಸಂಸ್ಥೆಗಳು, ಮುಂತಾದವುಗಳು. ಶಿಶುವಿಹಾರ ದಲ್ಲಿ ಶಿಶು ಕುಟುಂಬದ ಮರ್ಯಾದಿತ ಕ್ಷೇತ್ರದಿಂದ ಹೊರಗೆ ಹೋಗಿ ಬೇರೆ ಶಿಶುಗಳೊಡನೆ ಬೆರೆತು, ಆಟ ಪಾಟಗಳನ್ನಾಡುವದರಿಂದ ಬೇರೆ ಬೇರೆ ವ್ಯಕ್ತಿಗಳೊಡನೆ ಅವುಗಳೊಡನೆ ಏಕತೆಯಿಂದ ವರ್ತಿಸುವದನ್ನು ಕಲಿಯು ತ್ತದೆ, ಅಲ್ಲಿ ಮಗು ಬೇರೆ ಬೇರೆ ವಿಚಾರಗಳನ್ನು ಕಲಿಯುವದಲ್ಲದೆ ಬೇರೆ ಬೇರೆ ಮಗುಗಳೊಡನೆ ಸಮಾನ ಸ್ಥಾನದಲ್ಲಿ ವರ್ತಿಸುವದನ್ನೂ ಕಲಿಯುತ್ತದೆ ಶಾಲೆಯಲ್ಲಿ ವಿದ್ಯಾರ್ಥಿ ತನ್ನ ವ್ಯಕ್ತಿತ್ವದ ಬೆಳವಣಿಗೆಯನ್ನು ಉನ್ನತಮಾಡಿ ಕೊಂಡು ಒಕ್ಕಟ್ಟು, ಸಾಂಘಿಕ ಜೀವನ ಮುಂತಾದವುಗಳ ಮಹತ್ವವನ್ನು ಕಲಿ ಯುತ್ತಾನೆ. ಕಾಲೇಜುಗಳಲ್ಲಿಯ ಶಿಕ್ಷಣ ನಾಗರಿಕ ಶಿಕ್ಷಣಕ್ಷೇತ್ರದಲ್ಲಿಯ ಒಂದು ಉಚ್ಚವಾದ ಶಿಖರ. ಹೀಗೆ ಶಾಲೆ ಕಾಲೇಜುಗಳಲ್ಲಿ, ವಿಶ್ವವಿದ್ಯಾನಿಲಯಗಳಲ್ಲಿ ವಿದ್ಯಾರ್ಥಿಗಳು ಶಿಸ್ತು, ಅಚ್ಚುಕಟ್ಟುತನ, ನಿಯಮಿತತನ, ಸತತೋದ್ಯೋಗ ಮುಂತಾದ ನಾಗರಿಕತೆಯ ಅತಿ ಮಹತ್ವದ ಅಂಶಗಳನ್ನು ಕಲಿಯುತ್ತಾರೆ. ಶಾಲೆ ಕಾಲೇಜುಗಳಲ್ಲಿಯ ಚರ್ಚಾಕೂಟಗಳು, ಸ್ಕೂಲ ಪಾರ್ಲಿಮೆಂಟುಗಳು ನಾಗರಿಕರಲ್ಲಿ ಪ್ರಜಾಸತ್ತಾತ್ಮಕ ರಾಜ್ಯ ಪದ್ಧತಿಯ ಬಗ್ಗೆ ಆದರವನ್ನು ಬೆಳಿಸುತ್ತವೆ. ಅನೇಕ ಶಿಕ್ಷಣ ತಜ್ಞರು (ಮಿಲಿಟನ್, ಪ್ಲೇಟೋ) ಹೇಳುವಂತೆ ಶಿಕ್ಷಣದ ಗುರಿಯು ನಾಗರಿಕರಲ್ಲಿ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯ ಬಗ್ಗೆ ಆದರವನ್ನು ಹುಟ್ಟಿಸುವದೇ ಆಗಿರುತ್ತದೆ. ಕ್ಲಬ್ಬುಗಳು ಅದರಲ್ಲಿಯ ಸದಸ್ಯರು ತಮ್ಮ ಭಿನ್ನ ಪ್ರಕೃತಿಗಳನ್ನು ಮರೆತು ಕೆಲವು ವಿಷಯಗಳಲ್ಲಿ ಒಂದೇ ಅಭಿಪ್ರಾಯಕ್ಕೆ ಬರಲು ಸಹಾಯ ಮಾಡುತ್ತವೆ. ವಿಶ್ವವಿದ್ಯಾ

ನಿಲಯದ ಶಿಕ್ಷಣದಿಂದ, ನಾಗರಿಕರಲ್ಲಿ ಜಗತ್ತಿನೊಡನೆ ಇದ್ದ ಸಂಬಂಧ, ಜಗದ್ಭಾಂಧವ್ಯ ಮುಂತಾದ ವಿಷಯಗಳ ಜ್ಞಾನವು ಆಗುತ್ತದೆ. ಆಟದ ಬೈಲುಗಳಲ್ಲಿ ವಿದ್ಯಾರ್ಥಿಗಳು ಸಾಂಘಿಕ ಜೀವನದ ಮಹತ್ವವನ್ನು ಕಲಿಯುವರು. ಆಟದ ಬೈಲು ದೇಶಕ್ಕೆ ಮುಖಂಡರನ್ನು ಕೊಡುತ್ತದೆ. ಮುಖಂಡನಲ್ಲಿರಬೇಕಾದ ದೂರದರ್ಶಿತ್ವ, ಜೊತೆಗಾರರ ಯೋಗಕ್ಷೇಮ ಮುಂತಾದ ಗುಣಗಳು ವಿದ್ಯಾರ್ಥಿಗಳಲ್ಲಿ ಮೊಳಕೆಯೊಡೆಯುತ್ತವೆ. ವಾಟರ್ಲೂ ಯುದ್ಧವನ್ನು ಗೆದೆಯಲು ಈಟನ್ನದ ಆಟದ ಬೈಲಿನಲ್ಲಿ ಆಡಿದ ಕ್ರಿಕೆಟ್ ಆಟವೇ ಕಾರಣವೆಂದು ಹೇಳುತ್ತಾರೆ. ಅಂದಮೇಲೆ ನಾಗರಿಕತೆಯ ಶಿಕ್ಷಣಕ್ಷೇತ್ರದಲ್ಲಿ ಆಟದಬೈಲು ವಹಿಸುವ ಪಾತ್ರದ ಅರಿವು ಆಗದೇ ಇರದು. ಸ್ತ್ರೀವಿದ್ಯಾಭ್ಯಾಸವು ಬಹಳೇ ಮಹತ್ವದ್ದು. ಸ್ತ್ರೀಯರು ತಾವು ಕೇವಲ ಉತ್ತಮ ನಾಗರಿಕರಾಗುವರಲ್ಲದೆ, ಮತ್ತೆ ಉತ್ತಮ ನಾಗರಿಕರನ್ನು ನಿರ್ಮಾಣ ಮಾಡುತ್ತಾರೆ. ಆದಕ್ಕಾಗಿಯೇ ನೆಪೋಲಿಯನ್ನನು ಸ್ತ್ರೀ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದ್ದನು. ಕುಟುಂಬದಲ್ಲಿ ಕಲಿತ ಪ್ರಥಮ ಪಾಠಗಳು ಮುಂದೆ ನಾಗರಿಕ ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚಿನ ಸ್ಥಾನವನ್ನು ಅಲಂಕರಿಸಿವೆ,

ನಾಗರಿಕ ಶಿಕ್ಷಣವನ್ನು ಕೊಡುವದಕ್ಕೆ, ಹಾಗೂ ಅದರಲ್ಲಿ ಸಂಶೋಧನೆ ಮತ್ತು ಹೆಚ್ಚಿನ ಅಭ್ಯಾಸಗಳನ್ನು ಮುಂದುವರಿಸುವದಕ್ಕಾಗಿ ಮುಂಬಯಿಯಲ್ಲಿ ಒಂದು ಟಾಟಾ ಸೋಶಿಯಲ್ ಸ್ಕೂಲ ಎಂಬ ಸಂಸ್ಥೆ ಇದೆ. ಇಂಥ ಸಂಸ್ಥೆಗಳು ಬೆಳೆದು ದೇಶದಲ್ಲಿ ಶಿಕ್ಷಣದ— ಅದರಲ್ಲೂ ನಾಗರಿಕ ಶಿಕ್ಷಣದ ಪ್ರಸಾರವಾದರೆ ದೇಶದ ಉನ್ನತಿ ಹೆಚ್ಚುವದು.

**ಹಕ್ಕುಗಳು ಮತ್ತು ಕರ್ತವ್ಯಗಳು**

ಸಾಮಾಜಿಕ ಜೀವನವು ಸುಖಮಯವಾಗುವದಕ್ಕಾಗಿ ರಾಷ್ಟ್ರವು ಪ್ರತಿಯೊಬ್ಬನಿಗೂ ಕೆಲವು ಹಕ್ಕುಗಳನ್ನು ಕೊಡುತ್ತದೆ. ಆದುದರಿಂದ ಪ್ರತಿಯೊಬ್ಬನೂ ಈ ಹಕ್ಕುಗಳು ಯಾವವೆಂದು ತಿಳಿದುಕೊಂಡಿರುವದು ಒಳಿತು. ಈ ಹಕ್ಕುಗಳ ಮುಖಾಂತರ ವ್ಯಕ್ತಿಗೆ ತನ್ನ ಕೊರತೆಗಳನ್ನು ನೀಗಿಸಲು ತುಂಬಾ ಸಹಾಯವಾಗುತ್ತದೆ. ಆದುದರಿಂದಲೇ ಆ ವ್ಯಕ್ತಿಯು ವ್ಯಕ್ತಿತ್ವದ ವಿಕಾಸಕ್ಕೆ ಅನುವು ದೊರೆಯುತ್ತದೆ. ವ್ಯಕ್ತಿಯ ಸರ್ವತೋಮುಖವಾದ ಹಿತಕ್ಕಾಗಿ ಸಮಾಜವು ಈ ಹಕ್ಕುಗಳಿಗೆ ಮನ್ನಣೆಯನ್ನು ಕೊಡುತ್ತದೆ.

## ಹಕ್ಕುಗಳ ವರ್ಗೀಕರಣ




ಹಕ್ಕುಗಳನ್ನು ಮೇಲಿನಂತೆ ವರ್ಗೀಕರಿಸಿದರೂ ಇಂತಹ ಹಕ್ಕುಗಳು ಇಂತಹ ವರ್ಗದಲ್ಲಿಯೇ ಸೇರುತ್ತವೆ. ಎಂದು ಹೇಳುವದು ತುಸು ಗಡುಚಾದ ಕೆಲಸ. ಏಕೆಂದರೆ ಎರಡು ವರ್ಗಗಳ ನಡುವೆ ಒಂದು ನಿರ್ದಿಷ್ಟವಾದ ಸೀಮಾ ಗೆರೆಯನ್ನು ಹಾಕಲು ಬರುವಂತಿಲ್ಲ.

**ಮಹತ್ವದ ಲೌಕಿಕ ಹಕ್ಕುಗಳನ್ನು ಕೆಳಗೆ ಕೊಡಲಾಗಿದೆ.**

(೧) ವ್ಯಕ್ತಿಸ್ವಾತಂತ್ರ್ಯ:— ಪ್ರತಿಯೊಬ್ಬನಿಗೂ ಜೀವಿಸುವ ಹಕ್ಕಿದೆ. ಪ್ರತಿಯೊಬ್ಬನು ಸ್ವಾಭಾವಿಕವಾಗಿ ಹುಟ್ಟಿಸಾಯುವವರೆಗೆ ತನ್ನ ಜೀವಕ್ಕೆ ಇಲ್ಲವೆ ಅವಯವಕ್ಕೆ ಯಾವ ಧಕ್ಕೆ ತಗಲದಂತೆ ಇರಬೇಕು. ಮತ್ತು ಯಾವ ವ್ಯಕ್ತಿಯನ್ನೂ ಕಾಯದೆ ವಿರುದ್ಧವಾಗಿ ಸೆರೆಹಿಡಿಯಲು ಇಲ್ಲವೆ ಆತನಿಗೆ ದೈಹಿಕ ದಂಡನೆಯನ್ನು ವಿಧಿಸಲು ಬರುವದಿಲ್ಲ.

(೨) ಆತ್ಮರಕ್ಷಣೆ:— ಪ್ರತಿಯೊಬ್ಬನಿಗೂ ಆತ್ಮರಕ್ಷಣೆಗಾಗಿ ಯೋಗ್ಯವಾದ ಮತ್ತು ಸರಕಾರಮಾನ್ಯವಾದ ಆಯುಧಗಳನ್ನು ಧರಿಸುವ ಹಕ್ಕಿದೆ.

(೩) ಸಂಚಾರ ಸ್ವಾತಂತ್ರ್ಯ:— ಸರಕಾರದ ಆಡಳಿತೆಗೆ ಒಳಪಟ್ಟ ಪ್ರದೇಶದಲ್ಲಿ ಬೇಕಾದ ವ್ಯಕ್ತಿಯು ಬೇಕಾದ ಪ್ರದೇಶದಲ್ಲಿ ಸಂಚರಿಸಬಹುದು ಮತ್ತು ನೆಲಿಸಬಹುದು.

(೪) ವಾಕ್-ಸ್ವಾತಂತ್ರ್ಯ:— ಪ್ರತಿಯೊಬ್ಬನಿಗೂ ತನ್ನ ವಿಚಾರಗಳನ್ನು ಸಮಾಜದಮುಂದಿಡಲು ಸಂಪೂರ್ಣ ಹಕ್ಕಿದೆ. ಪ್ರಜಾಪ್ರಭುತ್ವದ ಯಶಸ್ಸು ಈ ಹಕ್ಕನ್ನೇ ಅವಲಂಬಿಸಿದೆ. ಸಾರ್ವಜನಿಕ ವಿಷಯಗಳ ಬಗ್ಗೆ ನಡೆಯಿಸುವ ಚರ್ಚೆಯೇ ನಿಜವಾದ ಪ್ರಜಾಪ್ರಭುತ್ವದ ಹೆಗ್ಗುರುತು,

(ಝ) ಸಾರ್ವಜನಿಕ ಸಭೆಗಳನ್ನು ಮತ್ತು ಸಮ್ಮೇಲನಗಳನ್ನು ಕೂಡಿಸುವದು ಮತ್ತು ಸಂಘ ಸಂಸ್ಥೆಗಳನ್ನು ಸ್ಥಾಪಿಸುವದು.

(ಟ) ಧಾರ್ಮಿಕ ಸ್ವಾತಂತ್ರ್ಯ:— ಪ್ರತಿಯೊಬ್ಬನಿಗೂ ತನ್ನ ಬುದ್ಧಿಗೆ ಸರಿತೋರಿದ ಧರ್ಮವನ್ನು ಪಾಲಿಸಲು ಮತ್ತು ದೇವತೆಯನ್ನು ಆರಾಧಿಸಲು ಹಕ್ಕಿದೆ.

(ಠ) ಆಸ್ತಿಯ ಹಕ್ಕು:— ಕೆಲವು ನಿರ್ಬಂಧಗಳಿಗೆ ಒಳಪಟ್ಟು ಪ್ರತಿಯೊಬ್ಬನಿಗೆ ತನ್ನ ಆಸ್ತಿಯನ್ನು ಉಪಭೋಗಿಸಲು ಮತ್ತು ಉಪಯೋಗಿಸಲು ಪೂರ್ಣ ಹಕ್ಕುಂಟು.

(ಡ) ಕುಟುಂಬ ಜೀವನದ ಹಕ್ಕು:— ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಜೊತೆಗಾರರನ್ನು ಆರಿಸಲು ಮತ್ತು ಕೂಡಿ ನಡೆಯದಿದ್ದರೆ ವಿಚ್ಛೇದನವನ್ನು ಬೇಡಲು ಹಕ್ಕಿದೆ.

(ಢ) ಕಾಯ್ದೆಯ ಎದುರಿಗೆ ಎಲ್ಲರೂ ಸರಿಸಮಾನರು. ಉಚ್ಚ-ನೀಚ, ಬಲ್ಲಿದ ಬಡವ, ಎಂಬ ಭೇದ-ಭಾವವಿಲ್ಲದೆ ಕಾಯ್ದೆಗೆ ಅನುಸರಿಸಿ ಅಪರಾಧ ವಿಚಾರಣೆಯಾಗತಕ್ಕದ್ದು.

ಇವಲ್ಲದೆ ಮುಂದುವರಿದ ರಾಷ್ಟ್ರಗಳಲ್ಲಿ, ಕನಿಷ್ಟ ಪಕ್ಷಕ್ಕೆ ಪ್ರಾಥಮಿಕ ಶಿಕ್ಷಣವನ್ನು ಕೊಡುವದು, ಸದೃಢ ದೇಹದವರಿಗೆ ಉದ್ಯೋಗಗಳನ್ನು ಕಲ್ಪಿಸಿಕೊಡುವುದು ಮತ್ತು ವೃದ್ಧಾಪ್ಯದಲ್ಲಿ ಹಾಗೂ ಬೇನೆ ಬಿದ್ದಾಗ ಉಪಜೀವನದ ಸೌಕರ್ಯವನ್ನು ಒದಗಿಸುವದು ಇವೂ ಹಕ್ಕುಗಳೆಂದು ಎಣಿಸಲ್ಪಡುತ್ತವೆ.

## ರಾಜಕೀಯ ಹಕ್ಕುಗಳು

(೧) ಮತದಾನದ ಹಕ್ಕು:— ಪ್ರತಿಯೊಬ್ಬ ಪ್ರೌಢನಿಗೂ ವಿವಿಧ ಚುನಾವಣೆಗಳಲ್ಲಿ ಮತಪ್ರದಾನ ಮಾಡುವ ಹಕ್ಕಿದೆ.

(೨) ಚುನಾಯಿಸಿ ಬರುವ ಹಕ್ಕು:— ಪ್ರತಿಯೊಬ್ಬನಿಗೂ— ಅವನು ಹುಚ್ಚನು ಇಲ್ಲವೆ ಅಪರಾಧಿಯು ಇಲ್ಲವೆ ಮೂರ್ಖನು ಇಲ್ಲವೆ ದಿವಾಳೀ ಖೋರನು ಇರದಿದ್ದರೆ— ಚುನಾವಣೆಗೆ ಉಮೇದವಾರನಾಗಿ ನಿಂತು ಆರಿಸಿ ಬರುವ ಹಕ್ಕಿದೆ.

(೩) ಸರಕಾರೀ ನೌಕರಿಯನ್ನು ಮಾಡುವದು. ಪ್ರತಿಯೊಬ್ಬನಿಗೂ, ಸಾಕಷ್ಟು ಶಿಕ್ಷಣ ಮತ್ತು ಅನುಭವವಿದ್ದರೆ, ಜಾತಿ ಮತ ಮತ್ತು ಪಂಗಡಗಳ ಭೇದವಿಲ್ಲದೆ ಎಲ್ಲ ದರ್ಜೆಗಳ ಸೇವಾವೃತ್ತಿಯನ್ನು ಕೈಕೊಳ್ಳುವ ಹಕ್ಕಿದೆ.

**ಭಾರತದ ಘಟನೆಯಲ್ಲಿ ವಿವರಿಸಿದ ಮೂಲ ಭೂತ ಹಕ್ಕುಗಳು ಕೆಳಗಿನಂತಿವೆ:—**

(೧) ಕಾಯ್ದೆಯ ಮುಂದೆ ಎಲ್ಲರೂ ಸರಿಸಮಾನರು.

(೨) ಸರಕಾರವು ನಾಗರಿಕನ ಬಗ್ಗೆ ಧರ್ಮ, ಜಾತಿ, ಜನಾಂಗ, ಲಿಂಗ, ಇವುಗಳ ಮೂಲಕವಾದ ಭೇದಭಾವವನ್ನು ಎಣಿಸುವದಿಲ್ಲ.

(೩) ಸರಕಾರೀ ನೌಕರಿಯ ವಿಷಯದಲ್ಲಿ ಎಲ್ಲರಿಗೂ ಸಮವಾದ ಅವಕಾಶವಿದೆ.

(೪) ಅಸ್ಪೃಶ್ಯತೆಯನ್ನು ಲೋಪಮಾಡಲಾಗಿದೆ.

(೫) ಸರಕಾರವು ಆವ ಪದವಿಗಳನ್ನೂ ಕೊಡುವದಿಲ್ಲ. ಪರರಾಷ್ಟ್ರಗಳ ಸರಕಾರಗಳಿಂದ ಭಾರತದ ನಾಗರಿಕನು ಪದವಿ ಸ್ವೀಕರಿಸಲಾರನು.

(೬) ಎಲ್ಲ ನಾಗರಿಕನೂ ವಾಕ್‌ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯ, ಆಯುಧಗಳಿಲ್ಲದೆ ಶಾಂತರೀತಿಯಲ್ಲಿ ಸಭೆ ಸೇರುವದು, ಸಂಘ ಸಂಸ್ಥೆಗಳನ್ನು ಸ್ಥಾಪಿಸುವದು, ಭಾರತದ ಯಾವದೇ ಪ್ರದೇಶದಲ್ಲಿ ನಿರಾಂತಕವಾಗಿ ಸಂಚರಿಸುವದು, ಭಾರತದ ಯಾವದೇ ಪ್ರದೇಶಗಳಲ್ಲಿ ನೆಲೆಸುವದು. ಆಸ್ತಿಗಳನ್ನು ಗಳಿಸುವದು, ನಿರ್ವಹಿಸುವದು ಮತ್ತು ವಿನಿಯೋಗ ಮಾಡುವದು ಮತ್ತು ಯಾವದೇ ಉದ್ಯೋಗ, ವ್ಯಾಪಾರ, ವ್ಯವಹಾರ ನಡೆಸುವದು—ಈ ವಿಷಯಗಳಲ್ಲಿ ಸಮಾನ ಹಕ್ಕಿದೆ.

(೭) ಕಾಯ್ದೆಯನ್ನು ಭಂಗಮಾಡಿದುದು ಸಿದ್ಧವಾದರೆ ಮಾತ್ರ ಅಪರಾಧಿಯನ್ನು ಶಿಕ್ಷಿಸಲಾಗುವದು. ಅದೇ ಅಪರಾಧಕ್ಕಾಗಿ ವ್ಯಕ್ತಿಯನ್ನು ಒಂದಕ್ಕಿಂತ ಹೆಚ್ಚು ಸಲ ಶಿಕ್ಷಿಸಬಾರದು.

(೮) ಸಾಮಾನ್ಯವಾಗಿ ಯಾವ ಮನುಷ್ಯನೂ ಜೀವಿಸುವ ಹಕ್ಕು ಮತ್ತು ವ್ಯಕ್ತಿಸ್ವಾತಂತ್ರ್ಯಗಳನ್ನು ಕಳೆದುಕೊಳ್ಳಲಾರನು.

(೯) ಕೆಲವೊಂದು ನಿರ್ಬಂಧಗಳಿಗೆ ಒಳಪಟ್ಟು ಭಾರತ ಪ್ರದೇಶದಲ್ಲಿ ವ್ಯಾಪಾರ ವ್ಯವಹಾರಗಳು ನಿರಾತಂಕವಾಗಿರುವವು.

(೧೦) ಮಾನವ ಪ್ರಾಣಿಗಳ ವ್ಯಾಪಾರ ಮತ್ತು ಬಿಗಾರ ಮತ್ತು ಅದೇ ಮಾದರಿಯ ಉಳಿದ ಒತ್ತಾಯದ ದುಡಿತ ಇವು ನಿಷೇಧಿಸಲ್ಪಟ್ಟಿವೆ.

(೧೧) ೧೪ ವರ್ಷಕ್ಕಿಂತ ಕಡಿಮೆ ವಯಸ್ಸುಳ್ಳ ಮಕ್ಕಳನ್ನು ಕಾರಖಾನೆ, ಖಣಿ ಮತ್ತು ಇತರ ಅಪಾಯಕಾರಕ ಕೆಲಸಗಳಲ್ಲಿ ನೌಕರಿಗೆ ಇಟ್ಟುಕೊಳ್ಳ ಬಾರದು.

ಧಾರ್ಮಿಕ ಹಕ್ಕುಗಳು:—

(೧೨) ಸಾರ್ವಜನಿಕ ಶಾಂತಿ, ನೀತಿ ಮತ್ತು ಆರೋಗ್ಯಗಳಿಗೆ ಬಾಧೆ ಬರದಂತೆ ಎಲ್ಲರೂ ವಿವೇಕಸ್ವಾತಂತ್ರ್ಯ ಧಾರ್ಮಿಕ ಆಚಾರ-ವಿಚಾರ ಪ್ರಚಾರ-ಸ್ವಾತಂತ್ರ್ಯಗಳಿಗೆ ಬಾಧ್ಯಸ್ಥರು.

(೧೩) ಪ್ರತಿಯೊಂದು ಧಾರ್ಮಿಕ ವರ್ಗಕ್ಕೆ ದಾನ ಮತ್ತು ಧಾರ್ಮಿಕ ವಿಷಯಗಳಲ್ಲಿ ಆಡಳಿತೆ ನಡೆಯಿಸುವ ಹಾಗೂ ಸ್ಥಾವರ-ಜಂಗಮ ಆಸ್ತಿ ಗಳನ್ನು ಸಂಪಾದಿಸುವ ಮತ್ತು ಕಾಯ್ದೆಯಂತೆ ಅದರ ಆಡಳಿತೆ ನಡೆಯಿ ಸುವ ಹಕ್ಕಿದೆ.

(೧೪) ಧಾರ್ಮಿಕ ನಿಧಿಗೆ ತೆರ ಕೊಡಬೇಕೆಂಬ ಒತ್ತಾಯವಿಲ್ಲ.

ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕುಗಳು:—

(೧೫) ಯಾವದೇ ಸರಕಾರೀ ಇಲ್ಲವೆ ಸರಕಾರದ ಮನ್ನಣೆ ಅಥವಾ ಸಹಾಯ ಪಡೆದ ಶೈಕ್ಷಣಿಕ ಸಂಸ್ಥೆಯಲ್ಲಿ ಧಾರ್ಮಿಕ ಶಿಕ್ಷಣ, ಪೂಜೆಗಳ ವ್ಯವಸ್ಥೆ ಇದ್ದರೆ ಅದರಲ್ಲಿ ಭಾಗವಹಿಸಬೇಕೆಂಬ ಒತ್ತಾಯವಿಲ್ಲ.

(೧೬) ಎಲ್ಲ ನಾಗರಿಕರಿಗೆ ತಮ್ಮ ಭಾಷೆ, ಲಿಪಿ, ಮತ್ತು ಸಂಸ್ಕೃತಿ ಗಳನ್ನು ಕಾಯ್ದುಕೊಳ್ಳುವ ಹಕ್ಕಿದೆ. ಅಲ್ಪ ಸಂಖ್ಯಾಕರಿಗೆ ಯಾವದೇ ಬಗೆಯ ವಿಶೇಷ ಸವಲತ್ತುಗಳಿಲ್ಲ.

ಆಸ್ತಿಯ ಹಕ್ಕು:—

(೧೭) ಕಾನೂನಿನ ಅಧಿಕಾರ ಹೊರಪಡಿಸಿ ಯಾರಿಂದಲೂ ಅವರ ಆಸ್ತಿಯನ್ನು ಕಸಿದುಕೊಳ್ಳಲಾಗುವದಿಲ್ಲ.

ನಾಗರಿಕನ ಕರ್ತವ್ಯಗಳು

ಹಕ್ಕುಗಳು ಕರ್ತವ್ಯಗಳನ್ನು ಸೂಚಿಸುತ್ತವೆ. ಇವೆರಡನ್ನು ಬೇರ್ಪಡಿ ಸಲು ಸಾಧ್ಯವಿಲ್ಲ. ಇವೆರಡೂ ಒಂದು ನಾಣ್ಯದ ಎರಡು ಮೈಗಳಂತೆ ಇವೆ.

ಆದುದರಿಂದ ಇವು ಪರಸ್ಪರ ವಿರೋಧಿಗಳಾಗಿರದೆ ಪೂರಕಗಳಾಗಿವೆ. ತನ್ನ ದೃಷ್ಟಿಯಿಂದ ನೋಡಿದಲ್ಲಿ ಅವು ಹಕ್ಕುಗಳಾಗುತ್ತವೆ. ಆದರೆ ಪರರ ದೃಷ್ಟಿಯಿಂದ ನಿರೀಕ್ಷಿಸಿದಲ್ಲಿ ಅವೇ ಕರ್ತವ್ಯಗಳಾಗಿ ಪರಿಣಮಿಸುತ್ತವೆ. ಉದಾಹರಣಾರ್ಥವಾಗಿ 'ಅ'ನಿಗೆ ವ್ಯಕ್ತಿ ಸ್ವಾತಂತ್ರ್ಯವಿದ್ದರೆ ಅದಕ್ಕೆ ಭಂಗ ಬರಬಂತೆ ವರ್ತಿಸುವದು 'ಬ'ನ ಕರ್ತವ್ಯವಾಗಿದೆ. ಹಾಗೆಯೇ 'ಬ'ನ ವ್ಯಕ್ತಿಸ್ವಾತಂತ್ರ್ಯಕ್ಕೆ ಭಂಗ ಬರದಂತೆ ನೋಡಿಕೊಳ್ಳುವದು 'ಅ'ನ ಕರ್ತವ್ಯವು. ಇನ್ನೊಂದು ಉದಾಹರಣೆಯನ್ನು ತೆಗೆದುಕೊಳ್ಳಬಹುದು. 'ಅ'ನಿಗೆ ಒಂದು ಆಸ್ತಿಯ ಬಗ್ಗೆ ಹಕ್ಕಿದೆ ಎಂದು ಹೇಳುವಾಗ ಎರಡು ಮಹತ್ವದ ಸಂಗತಿಗಳು ಅದರಲ್ಲಿ ಅಡಕವಾಗುತ್ತವೆ. (೧) ಅವನಿಗೆ ಆ ಆಸ್ತಿಯ ಬಗ್ಗೆ ಇರುವ ಹಕ್ಕಿನ ವಿಷಯದಲ್ಲಿ ಇತರರು ಅದಕ್ಕೆ ಬಾಧಕವಾಗದಂತೆ ವರ್ತಿಸುವದು ಅವರ ಕರ್ತವ್ಯ. (೨) ಅದರಂತೆಯೇ ಅವನಾದರೂ ಇತರರಿಗೆ ಅಂತಹ ವಿಷಯದಲ್ಲಿದ್ದ ಹಕ್ಕುಗಳನ್ನು ಮನ್ನಿಸುವದು ಅವನ ಕರ್ತವ್ಯವು.

### ನಾಗರಿಕನ ಮಹತ್ವದ ಕರ್ತವ್ಯಗಳು

(೧) ಕಾಯದೆಯನ್ನು ಪಾಲಿಸುವದು:— ಪ್ರತಿಯೊಬ್ಬ ನಾಗರಿಕನು ರಾಷ್ಟ್ರದ ಕಾನೂನುಗಳನ್ನು ಮನ್ನಿಸಬೇಕು.

(೨) ಸರಕಾರನಿಷ್ಠೆ:— ಪ್ರತಿಯೊಬ್ಬ ನಾಗರಿಕನು ಸರಕಾರ ನಿಷ್ಠನಾಗಿರಬೇಕು. ಮತ್ತು ಸರಕಾರದ ಆಡಳಿತೆಗೆ ಎಲ್ಲ ಬಗೆಯ ಸಹಾಯವನ್ನು ನೀಡಬೇಕು.

(೩) ಮತದಾನ ಮಾಡುವದು:— ಪ್ರತಿಯೊಬ್ಬ ನಾಗರಿಕನು ಚುನಾವಣಿಯಲ್ಲಿ ಸಾರಾಸಾರ ವಿಚಾರಮಾಡಿ ಮತವನ್ನು ಕೊಡಬೇಕು. ಈ ಕರ್ತವ್ಯವನ್ನು ಸರಿಯಾಗಿ ಪಾಲಿಸದೇ ಇದ್ದಲ್ಲಿ ಪ್ರಜಾಪ್ರಭುತ್ವವು ಒಂದು ಪರಿಹಾಸವಾಗಿ ಪರಿಣಮಿಸುವದೇ ಹೊರತು ಅದರಿಂದ ನಿಜವಾದ ಲಾಭಗಳಾಗಲಾರವು.

(೪) ತೆರಿಗೆ ಕೊಡುವದು:— ತರಕಾರಕ್ಕ ಆಡಳಿತೆಯನ್ನು ಸುಸೂತ್ರವಾಗಿ ಸಾಗಿಸಲು ಹಣವು ಆವಶ್ಯಕ. ಆದ್ದರಿಂದ ತೆರಿಗೆಯನ್ನು ಕೊಡುವದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವು.

(೫) ಇತರ ಸಾಮಾಜಿಕ ಕರ್ತವ್ಯಗಳು:— ಪ್ರತಿಯೊಬ್ಬ ನಾಗರಿಕನು ತನ್ನ ಸಾಮಾಜಿಕ ಹೊಣೆಯನ್ನು ಸರಿಯಾಗಿ ಅರಿತುಕೊಳ್ಳಬೇಕು. ಸಮಾಜದ ಹಿತದಲ್ಲಿಯೇ ತನ್ನ ಹಿತವಿದೆ ಎಂಬ ಭಾವನೆ ಅವನಲ್ಲಿ ದೃಢವಾಗಿ ಬೇರೂರಬೇಕು. ವ್ಯಕ್ತಿಯ ಹಿತಕ್ಕಿಂತ ಸಮಾಜದ ಹಿತಕ್ಕೆ ಹೆಚ್ಚು ಮಹತ್ವ ಕೊಡುವ ಮನೋವೃತ್ತಿ ಬೆಳೆಯಬೇಕು. ತನ್ನ ಕುಟುಂಬದ ಜನರೊಡನೆ ಸಹಕಾರ ಹಾಗೂ ತಾಳ್ಮೆಯಿಂದ ವರ್ತಿಸಬೇಕು. ನೆರೆ ಹೊರೆಯವರೊಡನೆ ಅಕ್ಕರೆಯಿಂದ ನಡೆದುಕೊಳ್ಳಬೇಕು; ಮತ್ತು ಎಲ್ಲಕ್ಕೂ ಮಹತ್ವದ ಸಂಗತಿ ಎಂದರೆ ಸಮಾಜ ಹಿತಕ್ಕೆ ವಿಶೇಷ ಲಕ್ಷ್ಯಗೊಟ್ಟು ಅದನ್ನು ಸಾಧಿಸುವದರಲ್ಲಿಯೇ ತನ್ನ ಹಾಗೂ ರಾಷ್ಟ್ರದ ಹಿತವಿದೆ ಎಂದು ದೃಢವಾಗಿ ನಂಬಿ ಅದಕ್ಕಾಗಿ ತ್ರಿಕರಣಪೂರ್ವಕವಾಗಿ ಹೆಣಗಬೇಕು.

ತನ್ನ ನೆರೆಹೊರೆಯನ್ನು ಸ್ವಚ್ಛವಾಗಿಡುವದು, ಇತರರೊಡನೆ ಸಭ್ಯತನದಿಂದ ವರ್ತಿಸುವದು, ಕರೆಬಂದಲ್ಲಿ ಅಸೆಸರ ಇಲ್ಲವೆ ಜ್ಯೂರರ ಇಲ್ಲವೆ ಪಂಚನಾಗಿ ಕಾರ್ಯಮಾಡುವದು, ಇವು ಇತರ ಕರ್ತವ್ಯಗಳು.

### ಸಮಾಜ ಮತ್ತು ವ್ಯಕ್ತಿ

ಬಹುಕಾಲದ ಹಿಂದೆ ಅರಿಸ್ಟಾಟಲನೆಂಬ ವಿಖ್ಯಾತ ಗ್ರೀಕ ತತ್ವಜ್ಞಾನಿಯು ಹೇಳಿದಂತೆ ಮಾನವನು ಸಂಘಜೀವಿಯು, ಎಂದರೆ ಮನುಷ್ಯನು ಸಮಾಜದಲ್ಲಿ ಹುಟ್ಟಿ ಬೆಳೆಯುತ್ತಾನೆ.

ಮಾನವನು ಸಂಘಜೀವಿಯಾಗಲು ಮೂರು ಮುಖ್ಯ ಕಾರಣಗಳಿವೆ:—

(೧) ಆತನು ಹುಟ್ಟಿದಾಗ ತೀರ ಅಸಹಾಯ ಸ್ಥಿತಿಯಲ್ಲಿರುವನು. ಎಷ್ಟೋ ತಿಂಗಳು ಮತ್ತು ವರುಷಗಳ ವರೆಗೆ ಅವನು ತನ್ನ ತಾಯಿ ತಂದೆ ಮತ್ತು ಇತರರ ಮೇಲೆ ತನ್ನ ಉಪಜೀವನಕ್ಕಾಗಿ ಅವಲಂಬಿಸಿರುತ್ತಾನೆ. ಈ ಮೇರೆಗೆ ಮಕ್ಕಳು ದೊಡ್ಡವರಾಗಿ ಬೆಳೆಯಲು ಸಮಾಜವು ಅವಶ್ಯ ಮಾನವ ಕೋಟಿಯು ಚಿರಂತನವಾಗಿ ಬಾಳಲು ಸಮಾಜವು ಅತ್ಯವಶ್ಯ.

(೨) ಮಾನವನು ಸಮಾಜದಲ್ಲಿಯೇ ಪ್ರಗತಿಯನ್ನು ಹೊಂದಬಲ್ಲನು. ಸಮಾಜದಲ್ಲಿರದಿದ್ದರೆ ಆತನಿಗೆ ಆವ ಭಾಷೆಯೂ ಬರಲಾರದು. ಮತ್ತು ಭಾಷೆಯಿರದಿದ್ದರೆ ಪ್ರಗತಿಯನ್ನು ಹೊಂದುವದೇ ಅಸಾಧ್ಯ. ಹೀಗೆ ಮಾನವನು ಸಮಾಜದಲ್ಲಿಯೇ ಮಾನವನಾಗಿ ಉಳಿಯ ಬಲ್ಲನು.

(೩) ಬಾಲ್ಯದಲ್ಲಿ ಹುಡುಗನ ಮನಸ್ಸು ಬಹಳ ಕೋಮಲವಾಗಿರುತ್ತದೆ. ಆ ಕಾಲಕ್ಕೆ ಮೂಡಿದ ಭಾವನೆಗಳು ಚಿರಕಾಲ ಅಜ್ಯೋತ್ತಿದಂತೆ ಆಗುತ್ತವೆ. ಪ್ರೀತಿ, ಸಹಾನುಭೂತಿ, ಔದಾರ್ಯ, ಕೃತಜ್ಞತೆ, ಈ ಮೊದಲಾದ ಗುಣಗಳಿಗೆ ಸಮಾಜವಿಲ್ಲದಿದ್ದರೆ ಅರ್ಥವೇ ಉಳಿಯಲಾರದು. ಅದೇ ಮೇರೆಗೆ ಸಾಮಾಜಿಕ ನೈಜ ಪ್ರವೃತ್ತಿಗಳಾದ ಭಯ, ಅನುಕರಣೆ, ಲೈಂಗಿಕ ಪ್ರವೃತ್ತಿ ಮುಂತಾದವುಗಳನ್ನು ಸಮಾಜದಲ್ಲಿಯೇ ತೃಪ್ತಿ ಪಡಿಸುವದು ಶಕ್ಯವಾಗುತ್ತದೆ.

ಈ ರೀತಿಯಾಗಿ ಮನುಷ್ಯನು ಸಮಾಜದಲ್ಲಿ ಹುಟ್ಟಿ ಬೆಳೆದು ಬಾಳಿ ಉಳಿಯುತ್ತಾನೆ. ಸಮಾಜವು ಆತನಲ್ಲಿ ಇದೆ. ಮತ್ತು ಆತನ ಸುತ್ತುಮುತ್ತಲೂ ಇದೆ. ಇವೆರಡ ನಡುವೆ ಎಳ್ಳಷ್ಟೂ ವಿರೋಧವಿಲ್ಲ. ಮತ್ತು ಸಮಾಜವಾದರೂ ವ್ಯಕ್ತಿಗಳ ಸಂಕಲನವು. ವ್ಯಕ್ತಿಗಳ ಹೊರತು ಸಮಾಜವು ಇರಲಾರದು. ಹೀಗೆ ವ್ಯಕ್ತಿಗಳಿದ್ದರೆ ಸಮಾಜ, ಸಮಾಜವಿದ್ದರೆ ವ್ಯಕ್ತಿಗಳು ಎಂಬ ಸಂಗತಿಯು ಸ್ಪಷ್ಟವಾಗಿ ಕಂಡು ಬರುತ್ತದೆ. ಸಂಕ್ಷಿಪ್ತದಲ್ಲಿ ಹೇಳುವುದಾದರೆ ಮಾನವನು ಸಮಾಜದ ಬೀಜವೂ ಆಹುದು. ಮತ್ತು ಅದರ ಫಲವೂ ಆಹುದು. (Man is both a product aud factor of society)

**ಸಾಮಾಜಿಕ ಕಟ್ಟಳೆಗಳು** (Social Laws):—

ಹಿಂದೆ ವಿವರಿಸಿದಂತೆ ಸಮಾಜದ ಸೌಖ್ಯವು ದೊರೆಯುವದಕ್ಕಾಗಿ ತ್ರಿಕರಣಪೂರ್ವಕವಾಗಿ ಹೆಣಗುವದು ಪ್ರತಿಯೊಬ್ಬನ ಕರ್ತವ್ಯವಾಗಿದೆ. ಆದರೆ ಈ ಸಮಾಜವಾದರೋ ಕೆಲವೊಂದು ಕಟ್ಟಳೆಗಳಿಗೆ ಒಳಪಟ್ಟಿರುತ್ತದೆ. ಸಮಾಜದಲ್ಲಿ ಯಾವದೇ ಬಗೆಯ ನಿಯಮ ನಿರ್ಬಂಧಗಳಿಲ್ಲದೇ ಹೋದಲ್ಲಿ ಯಾರಿಗೂ ಯಾವ ಸೌಖ್ಯವೂ ಲಭಿಸಲಾರದು. ಪ್ರತಿಯೊಬ್ಬ ವ್ಯಕ್ತಿಯು ತನ್ನ ಮನಬಂದಂತೆ ವರ್ತಿಸತೊಡಗಿದರೆ ಸಮಾಜದ ಶಾಂತಿ ಸುವ್ಯವಸ್ಥೆಗೆ ಧಕ್ಕೆ ತಗಲುವದು. ಏಕೆಂದರೆ ಒಬ್ಬನ ಹಿತವು ಇನ್ನೊಬ್ಬನ ಹಿತಕ್ಕೆ ಬಾಧಕವಾಗಬಹುದು. ಹೀಗೆ ವ್ಯಕ್ತಿ ಮತ್ತು ಸಮಾಜದ ಹಿತ ಸಾಧಿಸಲು ಕೆಲ

ಪ್ರೊಂದು ಕಟ್ಟುನಿಟ್ಟುಗಳಿರುವದು ಅವಶ್ಯಕ. ಈ ಕಟ್ಟುನಿಟ್ಟುಗಳು ಅನೇಕ ಬಗೆಯುವಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ರೂಢಿ—ಸಂಪ್ರದಾಯ ಅಥವಾ ಪರಂಪರೆ; ಕಾಯ್ದೆ—ಕಾನೂನು; ನೈತಿಕಕಟ್ಟಳೆ ರೂಢಿ—ಪ್ರತಿಯೊಂದು ಸಮಾಜದಲ್ಲಿ ಕೆಲವೊಂದು ರೂಢಿ ಹಾಗೂ ಸಂಪ್ರದಾಯಗಳು ರೂಢವಾಗಿರುತ್ತವೆ. ಈ ಪರಂಪರೆಗಳು ಒಬ್ಬ ವ್ಯಕ್ತಿಯ ಒಲವು ನಿಲವುಗಳನ್ನವಲಂಬಿಸಿರದೆ ಜನರ ಜೀವನದ ಮೇಲೆ ಆಧಾರಭೂತವಾಗಿರುತ್ತವೆ. ಇವನ್ನು ಯಾವ ವ್ಯಕ್ತಿಯೂ ನಿರ್ಮಿಸುವದಿಲ್ಲ. ಆದರೆ ಅನೇಕ ಜನರು ಆಚರಿಸುವ ಮಾರ್ಗಗಳಿಂದ ಇವು ತಮ್ಮಷ್ಟಕ್ಕೆ ತಾವೇ ಬೆಳೆಯುತ್ತ ಹೋಗುತ್ತವೆ. ಇವನ್ನು ಪಾಲಿಸಿಯೇ ತೀರಬೇಕೆಂಬ ನಿರ್ಬಂಧವಿಲ್ಲದಿದ್ದರೂ ಸಾಮಾನ್ಯವಾಗಿ ಯಾರೂ ಇವನ್ನು ತಿರಸ್ಕರಿಸುವದಿಲ್ಲ. ಏಕೆಂದರೆ ಇವನ್ನು ಅನುಸರಿಸುವದರಲ್ಲಿಯೆ ತನ್ನ ಹಾಗೂ ಪರರ ಹಿತವಿದೆ. ಸಮಾಜವು ಈ ಪರಂಪರೆಗಳನ್ನು ಅತಿಕ್ರಮಿಸುವವರನ್ನು ದಂಡ, ಬಹಿಷ್ಕಾರ ಮುಂತಾದವುಗಳಿಂದ ನಿಯಂತ್ರಿಸುತ್ತದೆ ಈ ಸಂಪ್ರದಾಯಗಳು ಯಾವ ಪುಸ್ತಕದಲ್ಲಿಯೂ ಬರೆಯಲ್ಪಟ್ಟಿರುವದಿಲ್ಲ. ಇವನ್ನು ರಾಷ್ಟ್ರೀಯ ಕವನ, ಲಾವಣಿ ಹಾಡು, ನೀತಿಯ ಮಾತುಗಳಲ್ಲಿ ಕಾಣಬಹುದು ಕಾಲಮಾನ ಪರಿಸ್ಥಿತಿಯನ್ನು ಅನುಸರಿಸಿ ಈ ಸಂಪ್ರದಾಯಗಳು ಬದಲಾಗುತ್ತ ಹೋಗುತ್ತವೆ.

ಕಾಯ್ದೆ:—ಕಾಯ್ದೆಗಳು ಪರಂಪರೆಗಳಿಂದ ಭಿನ್ನವಾಗಿವೆ. ಸರಕಾರವು ಸಮಾಜದ ಹಿತದ ದೃಷ್ಟಿಯಿಂದ ಕೆಲವೊಂದು ಕಾನೂನುಗಳನ್ನು ರಚಿಸಿ ಅವನ್ನು ಜಾರಿಯಲ್ಲಿ ತರುತ್ತದೆ. ಈ ಕಾನೂನುಗಳೇ ನಾಗರಿಕರ ಪ್ರಗತಿಯನ್ನು ಸಾಧಿಸಿ ಅವರ ಹಕ್ಕು ಹಾಗೂ ಸ್ವಾತಂತ್ರ್ಯಗಳನ್ನು ರಕ್ಷಿಸುತ್ತವೆ. ಕಾಯ್ದೆಗಳನ್ನು ಪ್ರತಿಯೊಬ್ಬ ವ್ಯಕ್ತಿಯೂ ಶಿರಸಾ-ಮನ್ನಿಸಲೇಬೇಕು. ಕಾಯ್ದೆಗೆ ವಿರುದ್ಧವಾಗಿ ನಡೆದರೆ ಅವನು ಶಿಕ್ಷೆಗೆ ಪಾತ್ರನಾಗುವನು. ಅಂತೆಯೆ ಪ್ರತಿಯೊಬ್ಬನಿಗೂ ಕಾಯ್ದೆದ ಭೀತಿಯಿರುತ್ತದೆ.

ನೈತಿಕ ಕಟ್ಟಳೆ:— ಪರಂಪರೆ ಹಾಗೂ ಕಾನೂನುಗಳು ವ್ಯಕ್ತಿಯ ಮನಸ್ಸಿನ ವಿರುದ್ಧವಾಗಿಯೂ ಇರಬಹುದು. ಹಾಗಿದ್ದರೂ ಕೂಡ ಅವನು

ಅವುಗಳಿಗೆ ತಲೆ ತಗ್ಗಿಸಲೇಬೇಕು ಆದರೆ ನೈತಿಕ ಕಟ್ಟಳೆಗಳಾದರೋ ಆತನ ಮನಸ್ಸಿನಿಂದ ಹೊರ ಹೊಮ್ಮುತ್ತವೆ. ಆತನಿಗೆ ಯಾವುದು ಸರಿ, ಯಾವುದು ಸತ್ಯವೆಂದು ಕಾಣುವದೋ, ಯಾವುದು ನ್ಯಾಯವೆಂದು ತೋಚುವದೋ ಅದರಂತೆ ವರ್ತಿಸುವದೇ ನೈತಿಕ ಕಟ್ಟಳೆ ಎನಿಸುವದು.

ಮೇಲಿನ ಕಟ್ಟುನಿಟ್ಟುಗಳನ್ನು ಪಾಲಿಸುವಾಗ ಅನೇಕ ಬಗೆಯ ತೊಂದರೆಗಳೊದಗುವದುಂಟು. ಸಂಪ್ರದಾಯಗಳು ವ್ಯಕ್ತಿಯ ಒಲವಿಗೆ ವಿರುದ್ಧವಿರಬಹುದು. ಕಾಯ್ದೆಗಳು ಆ ವ್ಯಕ್ತಿಯ ದೃಷ್ಟಿಯಲ್ಲಿ ತನ್ನ ಹಾಗೂ ಸಮಾಜದ ಪ್ರಗತಿಗೆ ಬಾಧಕವಿರಬಹುದು. ವೈಯಕ್ತಿಕ ಹಿತ ಸಾಧಿಸುವಾಗ ಕೌಟುಂಬಿಕ ಹಿತ, ಸಮಾಜ ಹಿತ, ರಾಷ್ಟ್ರ ಹಿತಕ್ಕೆ ಬಾಧೆ ಬರಬಹುದು, ಇದೇ ಮೇರೆಗೆ ಕುಟುಂಬ ಹಿತವು ಸಮಾಜಕ್ಕೆ ಅಥವಾ ರಾಷ್ಟ್ರಕ್ಕೆ ಗಂಡಾಂತರ ವಾಗಿರಬಹುದು. ಈ ಎಲ್ಲ ಸಂದರ್ಭಗಳಲ್ಲಿ ವ್ಯಕ್ತಿಯು ಹೇಗೆ ವರ್ತಿಸಬೇಕೆಂಬ ಮುಖ್ಯವಾದ ಸಮಸ್ಯೆಯು ಉದ್ಭವಿಸುತ್ತದೆ. ಇಂತಹ ಸಂದರ್ಭಗಳಲ್ಲಿ ವಿವಿಧ ಸಂಘ ಸಂಸ್ಥೆಗಳ ಮಹತ್ವವನ್ನು ನಿರ್ಣಯಿಸಿಕೊಂಡು, ಅದಕ್ಕೆ ಅನು ಗುಣವಾಗಿ ವರ್ತಿಸಬೇಕು. ಉಚ್ಚ ಉದ್ದೇಶ ಸಾಧಿಸುವದಕ್ಕಾಗಿ ಕಡಿಮೆ ಮಹತ್ವದ ತತ್ವಗಳನ್ನು ತ್ಯಜಿಸಬಹುದು. ಕುಟುಂಬಕ್ಕಾಗಿ ವ್ಯಕ್ತಿಯ ಹಿತ ಸಮಾಜಕ್ಕಾಗಿ ಕುಟುಂಬದ ಹಿತ, ರಾಷ್ಟ್ರಕ್ಕಾಗಿ ಸಮಾಜದ ಹಿತ ಬದಿ ಗಿರಿಸಬೇಕು.

ಮೇಲೆ ವಿವರಿಸಿದಂತೆ ಸರಕಾರದ ಕಾಯ್ದೆ ಕಾನೂನುಗಳನ್ನು ಪ್ರತಿ ಯೊಬ್ಬ ವ್ಯಕ್ತಿ ಪಾಲಿಸಲೇಬೇಕಾಗುವದು. ಆದರೆ ಕೆಲವು ಸಂದರ್ಭಗಳಲ್ಲಿ ದೇಶದ ಕಾನೂನುಗಳು ಅನ್ಯಾಯವಾದವುಗಳು ಇವೆ ಎಂದು ಸಂಪೂರ್ಣ ವಾಗಿ ಮನವರಿಕೆಯಾದಲ್ಲಿ ಮತ್ತು ಅವನ್ನು ಸಾಮೋಪಾಯದಿಂದ ಬದಲಿ ಸಲು ಸಾಧ್ಯವಿಲ್ಲವೆಂದು ನಿಶ್ಚಿತವಾಗಿ ಕಂಡುಬಂದಾಗ ಅವುಗಳನ್ನು ವಿರೋಧಿ ಸುವ ಹಕ್ಕು ನಾಗರಿಕನಿಗೆ ಇದೆ. ಈ ಸಂದರ್ಭದಲ್ಲಿ (೧) ಆಕ್ರಮಕ (active) ಮತ್ತು (೨) ಅಹಿಂಸಾತ್ಮಕ (pasive) ಎಂಬ ಎರಡು ರೀತಿ ಯಲ್ಲಿ ವಿರೋಧವನ್ನು ವ್ಯಕ್ತ ಮಾಡಬಹುದು. ಅಹಿಂಸಾತ್ಮಕ ವಿರೋಧ ವನ್ನು ತೋರಿಸುವಾಗ ವ್ಯಕ್ತಿಯು ಕಾಯ್ದೆ ಭಂಗ ಮಾಡುತ್ತಾನೆ. ಆದರೆ

ಅದಕ್ಕಾಗಿ ಕಾಯ್ದೆಯಲ್ಲಿ ಹೇಳಲಾದ ಶಿಕ್ಷೆಯನ್ನು ಅನುಭವಿಸಲು ಸಿದ್ಧನಿರುತ್ತಾನೆ. ಮಹಾತ್ಮಾ ಗಾಂಧೀಜಿ ಅವರು ಬ್ರಿಟಿಶ ಸರಕಾರದ ವಿರುದ್ಧ ಹೂಡಿದ ಅಸಹಕಾರ ಚಳವಳಿಯು ಈ ಮಾದರಿಯದಾಗಿತ್ತು. ಆದರೆ ಆಕ್ರಮಕ ವಿರೋಧಿಯು ಅಂಗಲಾಚಿ ಬೇಡಿಕೊಳ್ಳುವದಿಲ್ಲ. ಆತನು ಪ್ರತ್ಯಕ್ಷ ಬಂಡುಗಾರನು.

---

# ಅಧ್ಯಾಯ ೩

## ಸಾಮಾಜಿಕ ಸಂಸ್ಥೆಗಳು

**ಕುಟುಂಬ:—**

ಕುಟುಂಬದಲ್ಲಿ ಗಂಡ, ಹೆಂಡತಿ ಮತ್ತು ಅವರ ಮಕ್ಕಳ ಸಮಾವೇಶ ವಾಗುತ್ತದೆ. ಇದಲ್ಲದೆ ಬೇರೆ ಆಪ್ತರು ಇದ್ದಲ್ಲಿ ಅದಕ್ಕೆ ಅವಿಭಕ್ತ (joint) ಕುಟುಂಬವೆನ್ನುತ್ತಾರೆ.

ಕುಟುಂಬದ ಉತ್ಪತ್ತಿಯ ವಿಷಯದಲ್ಲಿ ಎರಡು ಭಿನ್ನಾಭಿಪ್ರಾಯಗಳಿವೆ. ಕೆಲವು ಪಂಡಿತರ ಅಭಿಪ್ರಾಯದಂತೆ, ಕುಟುಂಬವು ಲೈಂಗಿಕಸ್ವೈರಾ ಚಾರದಲ್ಲಿ ಉಗಮಹೊಂದಿ ಗುಂಪು ವಿವಾಹ ಪದ್ಧತಿ, ಬಹುಪತಿತ್ವ ಮುಂತಾದ ಸ್ಥಿತ್ಯಂತರಗಳನ್ನು ಹೊಂದಿ ಕೊನೆಗೆ ಸರ್ವಸಮ್ಮತವಾದ ಮತ್ತು ಅತ್ಯುತ್ತಮವೆಂದು ಪರಿಗಣಿಸಲ್ಪಟ್ಟ ಏಕಪತ್ನಿತ್ವದ ರೂಪವನ್ನು ತಾಳಿತು. ಬೇರೆ ಕೆಲವು ತಜ್ಞರ ಅಭಿಪ್ರಾಯದಂತೆ ಈ ಕುಟುಂಬದ ಪದ್ಧತಿಯು ಅನಾದಿ ಕಾಲದಿಂದಲೂ ಬಂದುದು. ಇದು ಇತಿಹಾಸದಷ್ಟೇ ಪ್ರಾಚೀನವಾದುದು. ಇದು ಇಲ್ಲದಂಥ ಕಾಲವನ್ನು ಕಲ್ಪಿಸುವದು ಕೂಡ ಅಸಾಧ್ಯವು. ಕುಟುಂಬವು ಸಮಾಜದ ಒಂದು ಮಹತ್ವದ ಭಾಗವು. ಇದರಲ್ಲಿಯೇ ಮಕ್ಕಳು ಹುಟ್ಟಿ ಬೆಳೆದು ಮಾನವ ಕುಲವು ನಿರಂತರವಾಗಿ ಸಾಗುತ್ತದೆ. ಇದರಲ್ಲಿ ಗಂಡ ಹೆಂಡತಿ ಮತ್ತು ಮಕ್ಕಳು, ಪ್ರೇಮ, ಸೇವೆ, ತ್ಯಾಗಬುದ್ಧಿ ಮುಂತಾದ ಪವಿತ್ರ ಭಾವನೆಗಳಿಂದ ಪರಸ್ಪರರಿಗೆ ಬಂಧಿತರಾಗುತ್ತಾರೆ. ಇದುವೆ ಬೌದ್ಧಿಕ ಮತ್ತು ನೈತಿಕ ಶಿಕ್ಷಣದ ಪ್ರಥಮ ಪಾಠಗಳನ್ನು ಕಲಿಸುವ ಶಾಲೆಯು. ನಾಗರಿಕನಲ್ಲಿ ಇರಬೇಕಾದ ಸದ್ಗುಣಗಳ ತವರ್ಮನೆಯು.

**ಕಾರ್ಯಗಳು:—**

(೧) ಇದರಲ್ಲಿಯೇ ಮಕ್ಕಳು ಹುಟ್ಟಿ ಬೆಳೆಯುವದರಿಂದ ಮಾನವ ಕುಲವು ನಿರಂತರವಾಗಿ ಬೆಳೆಯಲು ಸಹಾಯವಾಗುತ್ತದೆ.

(೨) ಆರ್ಥಿಕ ದೃಷ್ಟಿಯಿಂದ ಅದು ಸ್ವಯಂಪರಿಪೂರ್ಣವಾಗಿರುತ್ತದೆ. ಕುಟುಂಬದ ಜನರೆಲ್ಲ ಒಂದು ವಿಶಿಷ್ಟವಾದ ವ್ಯವಸಾಯವನ್ನು ಕೈಕೊಂಡು ಎಲ್ಲರ ಜೀವನಕ್ಕೆ ಬೇಕಾಗುವ ಅವಶ್ಯಕತೆಗಳನ್ನು ಸಂಪಾದಿಸುತ್ತಾರೆ. ಇದರಿಂದ ಎಲ್ಲರ ಪೋಷಣೆಯಾಗುತ್ತದೆ.

(೩) ಕುಟುಂಬವು ಸಂಸ್ಕೃತಿಯ ಬೆಳವಣಿಗೆಗೆ ಸಹಾಯಕವಾಗುತ್ತದೆ. ತಂದೆಯು ಮಕ್ಕಳಿಗೆ ಹಿಂದಿನ ಸಂಸ್ಕೃತಿಯನ್ನು ಕೊಡುತ್ತಾನೆ, ಮತ್ತು ಆ ಮಕ್ಕಳು ಅದನ್ನು ಮುಂದಿನ ಪೀಳಿಗೆಗೆ ಸಾಗಿಸುತ್ತಾರೆ,

(೪) ಇದು ನಾಗರಿಕನಲ್ಲಿ ಇರಬೇಕಾದ ಎಲ್ಲ ಸದ್ಗುಣಗಳ ಪೋಷಣೆಯ ಮಂದಿರವು. ಯಾವ ಮನೆಯಲ್ಲಿ ಹೊಡೆ, ಬಡೆ, ಕೊಲ್ಲು ಈ ಶಬ್ದಗಳೇ ಮೇಲಿಂದ ಮೇಲೆ ಕೇಳಿಬರುತ್ತವೆಯೋ ಅಂಥ ಮನೆಯಲ್ಲಿ ಹುಟ್ಟಿ ಬೆಳೆಯುವ ಮಕ್ಕಳು ಸಾಮಾನ್ಯವಾಗಿ ಉತ್ತಮ ನಾಗರಿಕರಾಗಲಾರರು. ಒಂದು ಉಚ್ಚ ಸಂಸ್ಕೃತಿಯ ಮಟ್ಟವನ್ನು ಮುಟ್ಟಿದ ಮನೆಯಲ್ಲಿ ಮಕ್ಕಳು ಹಿರಿಯರಿಂದ ತ್ಯಾಗ ಬುದ್ಧಿಯನ್ನೂ, ಅಣ್ಣ ತಮ್ಮಂದಿರು ಅಕ್ಕತಂಗಿಯರಿಂದ ಬಂಧುಪ್ರೇಮ, ಸಹಕಾರ. ವಿನಯಶೀಲತೆ, ಆಜ್ಞಾಧಾರಕತೆ ಮತ್ತು ತಾಳ್ಮೆಯನ್ನೂ ಕಲಿಯುತ್ತಾರೆ. ಈ ಗುಣಗಳೇ ನಾಗರಿಕತೆಯ ಯಶಸ್ಸಿನ ತಳಹದಿ.

(೫) ಕುಟುಂಬವು ಮಾನಸಿಕ ಉಲ್ಹಾಸಕ್ಕೆ ಕಾರಣವಾಗಿದೆ. ದಿನದ ಬವಣೆಯಿಂದ ಬೇಸತ್ತ ಮನುಷ್ಯನು ಹಿಂದಿರುಗಿದಾಗ ತನ್ನ ಹೆಂಡರು ಮಕ್ಕಳ ಸಹವಾಸದಿಂದ, ಹುಡುಗರ ಆಟಪಾಟದಿಂದ ವಿನೋದವನ್ನು ಹೊಂದಿ ತನಗಾದ ಆಯಾಸವನ್ನು ಮರೆಯುತ್ತಾನೆ.

**ಕೌಟುಂಬಿಕ ಸೌಖ್ಯವು ಮನುಷ್ಯನಿಗೆ ದೊರೆಯಬೇಕಾದರೆ ಈ ಕೆಳಗಿನ ಸಂಗತಿಗಳು ಅವಶ್ಯವಾದವುಗಳು:—**

(ಅ) ಜೀವನದ ಸರ್ವಸಾಮಾನ್ಯವಾದ ಮಟ್ಟವನ್ನಾದರೂ ಕಾಯ್ದುಕೊಳ್ಳಲು ಆರ್ಥಿಕ ಸ್ಥಿತಿಯು ಸಮಾಧಾನವಾಗಿರಬೇಕು.

(ಬ) ಕುಟುಂಬದ ಜನರು ಸುಶಿಕ್ಷಿತರಿರಬೇಕು.

(ಕ) ಅವರು ಒಂದೇ ತರಹದ ಸ್ವಭಾವದವರಿರಬೇಕು. ಅವರಲ್ಲಿ ಐಕ್ಯಮತ್ಯವಿರಬೇಕು. ಪರಸ್ಪರರು ಹೊಂದಿಕೊಂಡು ಹೋಗುವಷ್ಟು ತಾಳ್ಮೆಯುಳ್ಳವರಿರಬೇಕು,

(ಡ) ಸ್ತ್ರೀಗೆ ಪುರುಷನಷ್ಟೇ ಸ್ಥಾನವಿರಬೇಕು.

**ಕುಟುಂಬದ ಪ್ರಭೇದಗಳು**

ಮುಖ್ಯವಾಗಿ ಕುಟುಂಬದಲ್ಲಿ ಎರಡು ಪದ್ಧತಿಗಳಿವೆ.

(೧) ಪಿತೃಪ್ರಧಾನ (Partiarchal) (೨) ಮಾತೃಪ್ರಧಾನ (Matriarchal).

ಮೊದಲನೆಯ ತರಹದಲ್ಲಿ ತಂದೆಯು ಕುಟುಂಬದ ಮುಖ್ಯಸ್ಥನು. ಎಲ್ಲರೂ ಆತನಿಗೆ ವಿಧೇಯರಾಗಿರುತ್ತಾರೆ. ತಂದೆಯ ಹೆಸರಿನಿಂದ ವಂಶಾವಳಿಯನ್ನು ಹೇಳುತ್ತಾರೆ. ಎರಡನೆಯದರಲ್ಲಿ ತಾಯಿಗೆ ಹೆಚ್ಚು ಪ್ರಾಶಸ್ತ್ಯವಿರುತ್ತದೆ.

ಇದಲ್ಲದೆ ಬೇರೆ ಬೇರೆ ವಿವಾಹ ಪದ್ಧತಿಗಳಿಗನುಣವಾಗಿ ಕುಟುಂಬವನ್ನು ವಿಭಾಗಿಸಬಹುದು. ಏಕಪತ್ನೀ ಕುಟುಂಬ; ಬಹುಪತ್ನೀ ಕುಟುಂಬ, ಬಹುಪತಿತ್ವ ಕುಟುಂಬ ಎಂದು. (ಇವುಗಳ ವಿವರಣೆಗಾಗಿ ವಿವಾಹ ಸಂಸ್ಥೆ ಈ ತಲೆಬರೆಹದ ಕೆಳಗೆ ನೋಡಿರಿ.)

**ಕುಟುಂಬದ ಭವಿತವ್ಯತೆ**

ಕುಟುಂಬದ ಭವಿತವ್ಯದ ಬಗ್ಗೆ ಎರಡು ಭಿನ್ನಾಭಿಪ್ರಾಯಗಳು ಕಂಡು ಬರುತ್ತವೆ. ಮೊದಲನೆಯದೆಂದರೆ ಈ ಪದ್ಧತಿಯು ಅವನತಿಗೆ ಇಳಿಯ ಹತ್ತಿದೆಯೆಂಬುದು. ಇದಕ್ಕೆ ಕಾರಣಗಳೆಂದರೆ ಔದ್ಯೋಗಿಕರಣ, ಉಪಜೀವನಕ್ಕಾಗಿ ಉಗ್ರವಾದ ಹೋರಾಟ, ಸುಶಿಕ್ಷಿತ ಮಹಿಳೆಯರಲ್ಲಿ ಮದುವೆಯ ಬಗ್ಗೆ, ಗೃಹಕೃತ್ಯಗಳ ಬಗ್ಗೆ ಮತ್ತು ಶಿಶುಪೋಷಣೆಯ ಬಗ್ಗೆ ಇರುವ ಅನಾಸ್ಥೆ, ಮದುವೆಯು ಒಂದು ಪವಿತ್ರವಾದ ಸಂಸ್ಕಾರ ಎಂದು ತಿಳಿಯದೆ ಅದು ಒಂದು ವ್ಯವಹಾರದಂತೆ ನಿರ್ದಿಷ್ಟ ಅವಧಿಯ ಒಡಂಬಡಿಕೆಯೆಂಬ ಭಾವನೆ, ಇವೇ ಮುಂತಾದವುಗಳು. ಇವಲ್ಲದೆ ಕೆಲವು ರಾಷ್ಟ್ರಗಳಲ್ಲಿ ಶಿಶುಪೋಷಣೆ ಮತ್ತು ಶಿಶುಗಳ ಶಿಕ್ಷಣದ ಭಾರವನ್ನು ತಾಯಿ ತಂದೆಗಳ ಬದಲಾಗಿ ಕೆಲವು ಸಾರ್ವಜನಿಕ ಸಂಸ್ಥೆಗಳು ವಹಿಸುತ್ತಿರುತ್ತವೆ. ಇವೆಲ್ಲದರ

ಪರಿಣಾಮವಾಗಿ ಕುಟುಂಬವು ಅಪಾಯಕ್ಕೀಡಾಗುವದರಲ್ಲಿದೆ ಎಂದು ಇವರ ಅಭಿಪ್ರಾಯ.

ಇದಕ್ಕೆ ಪ್ರತಿಯಾಗಿ ಆಶಾವಾದಿಗಳು ಕುಟುಂಬದ ಭವಿತವ್ಯವು ಉಜ್ವಲವಾಗಿದೆ ಎಂದು ಪ್ರತಿಪಾದಿಸುತ್ತಾರೆ. ಕುಟುಂಬವು ಆರ್ಥಿಕ ದೃಷ್ಟಿಯಿಂದ ಪರಿಪೂರ್ಣವಾಗಿದೆ. ಅದು ಸಂಸ್ಕೃತಿಯನ್ನು, ಮತ್ತು ಜ್ಞಾನವನ್ನು ತಲೆತಲಾಂತರಗಳಿಗೆ ಸಾಗಿಸುವ ಒಂದು ಉತ್ತಮ ಸಾಧನವಾಗಿದೆ. ಸುಶಿಕ್ಷಿತ ಸ್ತ್ರೀಯರಿಗೆ ವಿವಾಹದ ಬಗ್ಗೆ ಲವಮಾತ್ರವೂ ತಾತ್ಸಾರವಿಲ್ಲ. ಆದರೆ ಜೀವನದ ಎಲ್ಲ ಕಾರ್ಯ ಕ್ಷೇತ್ರಗಳಲ್ಲಿ ಸ್ತ್ರೀಯರಿಗೂ ಪುರುಷರಷ್ಟೇ ಸ್ಥಾನವಿರಬೇಕು; ಎಂಬುದೇ ಅವರ ಆಕಾಂಕ್ಷೆ. ಇದು ಎಲ್ಲರೂ ಒಪ್ಪುವಂತಹ ಮಾತೇ ಸರಿ. ಅಜ್ಞ ತಾಯಿಗಿಂತ ಸುಶಿಕ್ಷಿತ ತಾಯಿಯೇ ಮಕ್ಕಳ ಲಾಲನಪಾಲನೆಯನ್ನು ಮತ್ತು ಶಿಕ್ಷಣವನ್ನು ಹೆಚ್ಚು ಚನ್ನಾಗಿ ನೋಡಿಕೊಳ್ಳಬಹುದಲ್ಲವೆ? ಸಾರ್ವಜನಿಕ ಸಂಸ್ಥೆಗಳು ಈ ಕಾರ್ಯದಲ್ಲಿ ನೆರವಾದರೆ ಅದು ದೋಷವಾದೀತೆ? ಸ್ತ್ರೀಪುರುಷರಿಗೆ ಕೂಡಿ ನಡೆಯದಲ್ಲಿ ಮನೆಯನ್ನು ನರಕಸದೃಶವನ್ನಾಗಿ ಮಾಡುವದಕ್ಕಿಂತ ವಿವಾಹವಿಚ್ಛೇದನೆಯೇ ಹೆಚ್ಚು ಒಳಿತಾದ ಮಾರ್ಗವಲ್ಲವೆ?

ಸ್ತ್ರೀಗೆ ಈ ಎಲ್ಲ ಸವಲತ್ತುಗಳನ್ನು ಕೊಟ್ಟರೆ, ಅವಳು ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಹೆಚ್ಚು ಕೆಲಸಮಾಡಬಲ್ಲಳು. ರಾಷ್ಟ್ರವು ಕುಟುಂಬದ ಪದ್ಧತಿಯನ್ನು ಹತ್ತಿಕ್ಕಲು ಬಯಸದೆ ಅದು ತನ್ನ ಪವಿತ್ರವಾದ ಕರ್ತವ್ಯಗಳನ್ನು ಮಾಡಲು ಪ್ರಯತ್ನಿಸುತ್ತದೆ. ಕುಟುಂಬದ ಪದ್ಧತಿಯನ್ನು ಕೊಂಚ ಮಟ್ಟಿಗೆ ಸುಧಾರಿಸುವ ಮಾರ್ಗವೆಂದರೆ ಅದರ ಸ್ಥಿರತೆಗೆ ಧಕ್ಕೆ ಬಾರದಂತೆ ಅದರೊಳಗಿನ ಕ್ರೂರವಾದ ಮತ್ತು ಅನ್ಯಾಯದ ಪದ್ಧತಿಯನ್ನು ಕಿತ್ತು ಹಾಕುವದು.

ಈ ಎರಡೂ ಅಭಿಪ್ರಾಯಗಳನ್ನು ತೂಗಿ ನೋಡಲಾಗಿ, ಕುಟುಂಬ ಪದ್ಧತಿಗೆ ವಿಘಾತವಾದ ಸಂಗತಿಗಳು ಎಷ್ಟೇ ಇದ್ದರೂ, ಅದಕ್ಕೆ ಅನುಕೂಲವಿದ್ದ ಸಂಗತಿಗಳ ಬಲದಿಂದ ಅದು ಚಿರವಾಗಿ ಬಾಳುವದರಲ್ಲಿ ಸಂದೇಹವಿಲ್ಲ.

### ಅವಿಭಕ್ತ (ಸಂಯುಕ್ತ) ಕುಟುಂಬ (Joint Family)

ಅವಿಭಕ್ತ ಕುಟುಂಬವು ನಮ್ಮ ದೇಶದ ವೈಶಿಷ್ಟ್ಯವೆಂದರೆ ತಪ್ಪಾಗದು. ಇದು ಜಗತ್ತಿನ ಬೇರೆ ಬೇರೆ ಭಾಗದಲ್ಲಿಯೂ ಸ್ವಲ್ಪ ಮಟ್ಟಿಗೆ ಅಸ್ತಿತ್ವದಲ್ಲಿ

ಇದೆ. ಸಂಯುಕ್ತ ಕುಟುಂಬದಲ್ಲಿ ಗಂಡ, ಹೆಂಡತಿ, ಮಕ್ಕಳು ಮತ್ತು ಇತರ ಸಂಬಂಧಿಕರು ಒಂದೆಡೆಯಲ್ಲಿ ವಾಸಿಸುತ್ತಾರೆ. ಎಲ್ಲರೂ ಗಳಿಸಿದ್ದು ಒಂದೆಡೆಗೆ ಶೇಖರಿಸಲ್ಪಡುತ್ತದೆ. ಮತ್ತು ಅದರೊಳಗಿಂದ ತಮ್ಮ ತಮ್ಮ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವದಕ್ಕಾಗಿ ಬೇಕಾಗುವಷ್ಟೇ ಹಣವನ್ನು ಹಿರಿಯನ ಆಜ್ಞೆಯ ಮೇರೆಗೆ ಪ್ರತಿಯೊಬ್ಬರು ತೆಗೆದುಕೊಳ್ಳುತ್ತಾರೆ. ಹಿರಿಯನಿಗೆ ಎಲ್ಲರೂ ವಿಧೇಯರಾಗಿರುತ್ತಾರೆ. ಮತ್ತು ಅವನು ಕುಟುಂಬದ ಆಸ್ತಿಯ ಮೇಲ್ವಿಚಾರಣೆಯನ್ನು ಮಾಡುತ್ತಾನೆ. ಒಟ್ಟಿನಲ್ಲಿ ಕುಟುಂಬವು ಆಹಾರ, ಧರ್ಮ ಮತ್ತು ಆಸ್ತಿ, ಈ ಮೂರು ವಿಷಯಗಳಲ್ಲಿ ಸಂಯುಕ್ತ ವಾಗಿರುತ್ತದೆ. ಈ ಪದ್ಧತಿಯಲ್ಲಿ ಪ್ರತಿಯೊಬ್ಬನು ತನ್ನ ಶಕ್ತಿಯ ಮೇರೆಗೆ ದುಡಿದು ತನಗೆ ಬೇಕಾಗುವಷ್ಟು ಪಡೆಯುವದರಿಂದ ಇದು ಸಣ್ಣ ಪ್ರಮಾ ಣದ ಮೇಲೆ ಸಾಮ್ಯವಾದದ (Socialism) ಒಂದು ಪ್ರಯೋಗವೆಂದೆನ್ನಲು ಯಾವ ಅಭ್ಯಂತರವೂ ಇಲ್ಲ.

ಲಾಭಗಳು:—

(೧) ಇದರಲ್ಲಿ ಎಲ್ಲರಿಗೂ ಉಪಜೀವನವು ದೊರಕುತ್ತದೆ. ಮಕ್ಕಳು, ರೋಗಿಗಳು, ಮುದುಕರು, ಅಂಗಹೀನರು, ನಿರುದ್ಯೋಗಿಗಳು, ವಿಧವೆಯರು ಮತ್ತು ಪರದೇಶಿಗಳು ಮುಂತಾದವರಿಗೆ ಉಪಜೀವನವು ಸಿಕ್ಕುವದರಿಂದ ಇದು ಸಾರ್ವತ್ರಿಕ ಜೀವ ವಿಮೆಯ ಕಾರ್ಯವನ್ನು ಮಾಡುತ್ತದೆ.

(೨) ಎಲ್ಲರೂ ಒಂದೆಡೆಗೆ ವಾಸಿಸುವದರಿಂದ ಒಟ್ಟಿನ ಮೇಲೆ ವೆಚ್ಚವು ಕಡಿಮೆಯಾಗುತ್ತದೆ.

(೩) ಹಿರಿಯರ ಜ್ಞಾನಾನುಭವಗಳ ಲಾಭವನ್ನು ಕಿರಿಯರು ಪಡೆ ಯಲು ಅನುಕೂಲವಾಗುತ್ತದೆ.

(೪) ಇದು ಹಿರಿಯರ ಬಗ್ಗೆ ಆದರ, ವಿಧೇಯತೆ, ಸಹಕಾರ ಮುಂತಾದ ಸದ್ಗುಣಗಳನ್ನು ಕಲಿಸುತ್ತದೆ.

(೫) ಮನೆಯಲ್ಲಿ ಜನರು ಬಹಳಿರುವದರಿಂದ ಮಕ್ಕಳು ಹೆಚ್ಚು ಉತ್ತಮ ರೀತಿಯಲ್ಲಿ ಪೋಷಿಸಲ್ಪಡುತ್ತಾರೆ.

**ಹಾನಿಗಳು**

(೧) ಎಲ್ಲರನ್ನೂ ಒಂದೇ ಎರಕದಲ್ಲಿ ಹೊಯ್ದು ತೆಗೆದಂತಾಗುತ್ತದೆ. ಇದರಿಂದ ಸ್ವಾತಂತ್ರ್ಯ, ಸ್ವಪ್ರೇರಣೆ, ವ್ಯಕ್ತಿತ್ವ ಮುಂತಾದವುಗಳು ಲಯವಾಗುತ್ತವೆ. ಸೋಮಾರಿತನವು ಬೆಳೆಯುತ್ತದೆ.

(೨) ದೃಷ್ಟಿಕೋನಗಳು ಬೇರೆ ಬೇರೆಯಾಗಿ ಮನೆಯ ಜನರಲ್ಲಿ ತಿಕ್ಕಾಟಗಳು ಹೆಚ್ಚಾಗುತ್ತವೆ. ವೃದ್ಧರಗೂ ತರುಣರಿಗೂ ಕೂಡಿ ನಡೆಯದಂತಾಗುತ್ತದೆ. ಇದರಿಂದ ಮನೆಯು ನರಕಪ್ರಾಯವಾಗುತ್ತದೆ.

(೩) ಆರ್ಥಿಕ ಕಾರಣಗಳ ಮೂಲಕ ಬೇರೆ ಬೇರೆ ವ್ಯವಸಾಯಗಳನ್ನು ಕೈಕೊಳ್ಳಬೇಕಾಗುವದರಿಂದ ಮನೆಯ ಜನರಲ್ಲಿ ಸಂಯುಕ್ತ ಕುಟುಂಬದ ಯಶಸ್ಸಿಗೆ ಆವಶ್ಯಕವಾದ ಒಂದೇ ತರಹದ ಮನೋಭಾವನೆಯು ಉಳಿಯುವದಿಲ್ಲ.

(೪) ಗಂಡ ಹೆಂಡಿರ ನಡುವಿನ ಸಂಬಂಧವು ಈ ಪದ್ಧತಿಯಲ್ಲಿ ಅಷ್ಟೊಂದು ನಿರರ್ಗಳವಾಗಿ ಸಾಗಲಾರದು.

ಒಟ್ಟಿನ ಮೇಲೆ ಈ ಪದ್ಧತಿಯಿಂದ ಲಾಭಕ್ಕಿಂತ ಹಾನಿಯೇ ಹೆಚ್ಚು. ಆದ್ದರಿಂದಲೇ ಇದು ಕುಸಿದು ಬೀಳಹತ್ತಿದೆ. ವಿವಿಧ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗಳು ಅದರ ತಳಹದಿಯನ್ನೇ ಶಿಥಿಲಗೊಳಿಸಿವೆ. ಆಧುನಿಕ ತರುಣರ ಪ್ರತಿಭಟನೆ, ಪಾಶ್ಚಾತ್ಯ ಶಿಕ್ಷಣದ ಪ್ರಭಾವ, ಮಹತ್ವದ ಸಾಮಾಜಿಕ ಬದಲಾವಣೆಗಳು ಮತ್ತು ಸರಕಾರವು ತನ್ನ ಕೈಯನ್ನು ಹಾಕುವದು ಈ ಕಾರಣಗಳ ಮೂಲಕ ಸಂಯುಕ್ತ ಕುಟುಂಬವು ಕ್ರಮೇಣ ಲಯವಾಗಹತ್ತಿದೆ. ಇನ್ನು ಅಲ್ಪ ಕಾಲಾವಧಿಯಲ್ಲಿಯೇ ಇದು ಸಂಪೂರ್ಣವಾಗಿ ನಾಶಹೊಂದಬಹುದು.

**ಸಂಗಡ(community) ತಂಡ (Clan) ಮತ್ತು ಬಣ (Tribe):—**

ಸಮಾಜದ ಬೆಳವಣಿಗೆಯು ಸಾಮಾನ್ಯವಾಗಿ ಕೆಳಗೆ ವಿವರಿಸಿದ ರೀತಿಯಲ್ಲಿ ಆಗುತ್ತದೆ.

ಮೊದಲು ಗಂಡ, ಹೆಂಡತಿ, ಮತ್ತು ಅವರ ಮಕ್ಕಳು ಕೂಡಿ ಕುಟುಂಬವಾಗುತ್ತದೆ. ಈ ಕುಟುಂಬದಲ್ಲಿ ತಂದೆಯೇ ತನ್ನ ಹೆಂಡತಿ, ಮಕ್ಕಳು ಮತ್ತು ಆಸ್ತಿಯ ಸಂಪೂರ್ಣ ಯಜಮಾನನಾಗಿರುತ್ತಾನೆ. ಅವನು ಸತ್ತ ಮೇಲೆ ಅವನ ಅಧಿಕಾರವು ಅವನ ಹಿರಿಯ ಮಗನ ಕೈಸೇರುತ್ತದೆ. ಕುಟುಂಬವು

ನೈಸರ್ಗಿಕವಾಗಿ ಬೆಳೆಯುತ್ತ ಬೇರೆ ಕುಟುಂಬಗಳೊಡನೆ ಸಂಬಂಧವನ್ನು ಬೆಳೆಸುವದರಿಂಧ ಒಂದು ಸಂಗಡವು (Community) ಹುಟ್ಟುತ್ತದೆ. ಒಂದು ಸಂಗಡದ ಜನರು ಒಂದೇ ತರಹದ ಆಶೆ ಆಕಾಂಕ್ಷೆಗಳುಳ್ಳವರಾಗಿದ್ದು ಒಂದೇ ಬಗೆಯ ಕಾಯದೆ ಕಾನೂನುಗಳಿಗೆ ಒಳಪಟ್ಟವರಾಗಿರುತ್ತಾರೆ. ಅನೇಕ ಸಂಗಡಗಳು ಒಂದೆಡೆಯಲ್ಲಿ ಬಹುಕಾಲ ವಾಸಿಸುವದರಿಂದ ಮತ್ತು ಅವು ತಮ್ಮ ರಕ್ತಸಂಬಂಧವನ್ನು ಕಾಯ್ದುಕೊಂಡು ಕಾಲಕ್ರಮದಿಂದ ಬೆಳೆಯುವದರಿಂದ ತಂಡವು (Clan) ಹುಟ್ಟುತ್ತದೆ. ಈ ತಂಡಗಳು ಬೆಳೆಯುತ್ತ ಬೆಳೆಯುತ್ತ ಬಣ (Tribe)ವು ಹುಟ್ಟುತ್ತದೆ. ಈ ಬಣದ ಜನರಲ್ಲಿ ಒಂದೇ ಬಗೆಯ ರೂಢಿಗಳಿದ್ದು ಅವರೆಲ್ಲರೂ ಒಬ್ಬನೇ ಮೂಲ ಪುರುಷನಿಂದ ತಮ್ಮ ಉತ್ಪತ್ತಿಯನ್ನು ಹೇಳಿಕೊಳ್ಳುತ್ತಾರೆ. ಈ ರೀತಿಯಾಗಿ ಬಣವೇ ಅತಿ ಪ್ರಾಚೀನಕಾಲದ ರಾಜಕೀಯ ಸಂಸ್ಥೆಯಾಗಿತ್ತು. ಈ ಬಣಗಳೇ ಬೆಳೆಯುತ್ತ ಕಾಲಕ್ರಮದಿಂದ ರಾಷ್ಟ್ರಗಳಾಗಿ ಪರಿಣಮಿಸಿ ಒಬ್ಬೊಬ್ಬ ಅರಸನ ಆಧಿಪತ್ಯಕ್ಕೆ ಒಳಗಾಗುತ್ತವೆ

## ಹಳ್ಳಿ, ಪಟ್ಟಣ, ಪ್ರಾಂತ, ರಾಷ್ಟ್ರ.

ಅನೇಕ ಕುಟುಂಬಗಳು ಸಾಮಾನ್ಯವಾದ ಉದ್ದೇಶಗಳಿಗಾಗಿ ಒಂದೆಡೆಯಲ್ಲಿ ನೆಲಿಸಹತ್ತಿದವು. ಮನುಷ್ಯನು ಆಹಾರಕ್ಕಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಅಲೆಯಹತ್ತಿದನು. ಮೊಟ್ಟಮೊದಲು ಬೇಟೆಯಾಡುವದೇ ಮುಖ್ಯ ಉದ್ಯೋಗವಾಗಿದ್ದರೂ, ಸ್ವಲ್ಪ ಕಾಲದಲ್ಲಿ ಮನುಷ್ಯನು ಒಕ್ಕಲುತನದ ಹೋರೆಯನ್ನು ಕಲಿತೆನು. ಇದಕ್ಕಾಗಿ ಒಂದೆಡೆಯಲ್ಲಿ ನೆಲೆಸುವದು ಆವಶ್ಯಕವಾಯಿತು ಹೀಗೆ ನೆಲಿಸಿದಾಗ ವೈರಿಗಳಿಂದ ಮೇಲಿಂದಮೇಲೆ ದಾಳಿಗಳಾಗಹತ್ತಿದವು. ಆದುದರಿಂದ ಒಂದಕ್ಕೊಂದು ಸಂಬಂಧ ಹಾಗೂ ಸಾಮ್ಯವುಳ್ಳ ಅನೇಕ ಕುಟುಂಬಗಳು ಒಂದೆಡೆಯಲ್ಲಿ ಸೇರುವದರಿಂದ ಹಳ್ಳಿಯಾಯಿತು. ಅವರು ಗುಂಪುಕಟ್ಟಿ ಬೇಟೆಯಾಡುತ್ತಿದ್ದರು. ಮತ್ತು ಬೇಟೆಯಲ್ಲಿ ದೊರೆತುದನ್ನು ಸಮವಾಗಿ ಹಂಚಿಕೊಳ್ಳುತ್ತಿದ್ದರು. ಕೆಲವರು ಬೇಟೆಗೆ ಹೋದಾಗ ಕೆಲವರು ಹಳ್ಳಿಗಳಲ್ಲಿಯೇ ಇದ್ದುಕೊಂಡು ಹಳ್ಳಿಯ ರಕ್ಷಣೆಯನ್ನು ಮಾಡುವದು ಅತ್ಯಾವಶ್ಯಕವಾಯಿತು. ಮತ್ತು ರಕ್ಷಣೆಯ ಕೆಲಸಕ್ಕಾಗಿ ಉಪಕರಣಗಳನ್ನೊದಗಿಸಲು ಕಮ್ಮಾರರು, ಬಡಿಗರು, ಮುಂತಾದವರ

ಆವಶ್ಯಕತೆಯುಂಟಾಯಿತು. ಇವಲ್ಲದೆ ಒಕ್ಕಲತನದ ಉದ್ಯೋಗಕ್ಕಾಗಿ ರಂಟೆ, ಕುಂಟೆ ಮುಂತಾದವುಗಳನ್ನು ನಿರ್ಮಿಸಲು ಬಡಿಗರು, ಕಮ್ಮಾರರು ಬೇಕಾಗ ಹತ್ತಿದರು. ಈ ರೀತಿಯಾಗಿ ಹಳ್ಳಿಯ ಉತ್ಪತ್ತಿಯಾಯಿತು.

ಎಷ್ಟೋ ರಾಜಕೀಯ ಬದಲಾವಣೆಗಳಾದರೂ ಹಳ್ಳಿಯೇ ಸಾಮಾಜಿಕ ಜೀವನದ ತಳಹದಿಯಾಗಿ ಉಳಿದಿದೆ. ನಮ್ಮ ದೇಶದಲ್ಲಿಯಂತೂ ನೂರಕ್ಕೆ ೮೦ಕ್ಕಿಂತ ಹೆಚ್ಚು ಜನರು ಹಳ್ಳಿಗಳಲ್ಲಿಯೇ ವಾಸಿಸುತ್ತಾರೆ. ಪ್ರತಿಯೊಂದು ಹಳ್ಳಿಯಲ್ಲಿ ಒಕ್ಕಲಿಗರು, ಬಡಿಗರು, ಕಮ್ಮಾರರು, ನೇಕಾರರು, ಅಕ್ಕಸಾಲಿಗರು, ಅಗಸರು ಮುಂತಾದವರು ಸಹಕಾರದಿಂದ ಕೆಲಸ ಮಾಡುವದರಿಂದ ಹಳ್ಳಿಯ ಎಲ್ಲ ಕೊರತೆಗಳು ಸುಲಭವಾಗಿ ಪೂರೈಸಲ್ಪಡುತ್ತವೆ. ಹೀಗೆ ಸಾದಾ ಜೀವನ ಮತ್ತು ಇದ್ದುದರಲ್ಲಿಯೇ ತೃಪ್ತಿ ಹೊಂದುವದು ಇವು ಹಳ್ಳಿಗರ ಲಕ್ಷಣವಾಗಿವೆ.

ಆದರೆ ಇಂದು ಹಳ್ಳಿಯೊಳಗಿನ ಸ್ಥಿತಿಯು ತೀರ ಹದಗೆಟ್ಟು ಹೋಗಿದೆ. ಹಳ್ಳಿಗರು ಅಜ್ಞಾನ, ರೋಗ, ನಿರಕ್ಷರತೆ, ಬಡತನ ಮುಂತಾದವುಗಳಿಂದ ಪೀಡಿತರಾಗಿದ್ದಾರೆ. ಈ ಎಲ್ಲ ಅನರ್ಥಗಳನ್ನು ಹೋಗಲಾಡಿಸಿ ಅವರಿಗೆ ಯೋಗ್ಯ ವಾಸಸ್ಥಾನ, ಪೋಷಕ ಆಹಾರ, ಸ್ವಚ್ಛತೆಯ ಸಾಧನಗಳು, ಸಾಕಷ್ಟು ಶಿಕ್ಷಣ ಮುಂತಾದವುಗಳನ್ನು ಒದಗಿಸುವದು ಅತ್ಯವಶ್ಯವಾಗಿದೆ. ಇದಕ್ಕಾಗಿ ಸರಕಾರವು, ಸಾರ್ವಜನಿಕ ಸಂಸ್ಥೆಗಳು, ಸಮಾಜಧುರೀಣರು ಒಮ್ಮನಸ್ಸಿನಿಂದ ಹೆಣಗಬೇಕು. ಗ್ರಾಮಪಂಚಾಯತಿಗಳು ಸಹಕಾರಿ ಸಂಘಗಳು ಕಲ್ಯಾಣ ಕೇಂದ್ರಗಳು (Welfare centres) ಈ ಉದ್ದೇಶವನ್ನು ಸಾಧಿಸಲು ಅತ್ಯುಪಯುಕ್ತವಾದ ಸಾಧನಗಳು. ಆದರೆ ನಿಜವಾದ ಸುಧಾರಣೆಯು ಹಳ್ಳಿಗರನ್ನೇ ಕೂಡಿದೆ. ಅವರು ಸ್ವಚ್ಛತೆ, ಸಹಕಾರ, ಮಿತವ್ಯಯ, ನಾಗರಿಕತೆಯ ಹಕ್ಕು, ಹೊಣೆಗಾರಿಕೆಗಳ ಜ್ಞಾನ, ಮುಂತಾದವುಗಳ ಮಹತ್ವವನ್ನರಿತು ತಮ್ಮ ಸರ್ವತೋಮುಖವಾದ ಏಳಿಗೆಯನ್ನು ಸಾಧಿಸಬೇಕು.

**ಪಟ್ಟಣ:—**

ಹಳ್ಳಿಯ ಉತ್ಪತ್ತಿಯನ್ನು ಹಿಂದೆ ವಿವರಿಸಲಾಗಿದೆ. ಅನೇಕ ಕಾರಣಗಳ ಮೂಲಕ ಹಳ್ಳಿಗಳು ಬೆಳೆದು ಪಟ್ಟಣಗಳಾಗುತ್ತವೆ. ಮಧ್ಯವರ್ತಿಯಾದ

ಹಳ್ಳಿಯು ಕೂಡಲೆ ಬೆಳೆದು ಮಹತ್ವವನ್ನು ಪಡೆದು ಪಟ್ಟಣವಾಗುತ್ತದೆ. ರೇಲ್ವೆ, ವ್ಯಾಪಾರ, ಶಿಕ್ಷಣ ಮುಂತಾದ ಸೌಕರ್ಯಗಳುಳ್ಳ ಹಳ್ಳಿಗಳು ಬೇಗನೆ ಪಟ್ಟಣಗಳಾಗುತ್ತವೆ. ಅದರಂತೆಯೇ ತೀರ್ಥ-ಕ್ಷೇತ್ರಗಳು ಬಹು ಬೇಗನೆ ಪಟ್ಟಣಗಳಾಗುತ್ತವೆ. ಇದೇ ಮೇರೆಗೆ ರಾಜ್ಯದಾಡಳಿತೆಯ ಕೇಂದ್ರ ಗಳು, ಖನಿಜ-ಸಂಪತ್ತುಳ್ಳ ಹಳ್ಳಿಗಳು ಪಟ್ಟಣಗಳಾಗುತ್ತವೆ.

ಹಳ್ಳಿ ಮತ್ತು ಪಟ್ಟಣಗಳು ಒಂದನ್ನೊಂದು ಅವಲಂಬಿಸಿರುತ್ತವೆ ಹಳ್ಳಿಯು ಧಾನ್ಯ, ಹೈನ, ಉರವಲ, ಮತ್ತು ಕಚ್ಚಾಮಾಲನ್ನು ಪಟ್ಟಣ ಗಳಿಗೆ ಪೂರೈಸುತ್ತದೆ. ಇದಕ್ಕೆ ಪ್ರತಿಯಾಗಿ ಪಟ್ಟಣಗಳು ಹಳ್ಳಿಗರಿಗೆ ಪಕ್ಕಾ ಮಾಲನ್ನು ಪೂರೈಸುತ್ತವೆ. ಹಳ್ಳಿಗರು ಉಚ್ಚ ಶಿಕ್ಷಣಕ್ಕಾಗಿ ಪಟ್ಟಣಗಳನ್ನು ಸೇರಬೇಕಾಗುತ್ತದೆ. ಹೀಗೆ ಅವು ಒಂದನ್ನೊಂದು ಅವಲಂಬಿಸಿರುತ್ತವೆ.

ಪಟ್ಟಣಿಗರ ಸಮಸ್ಯೆಗಳು ಬಹುವಿಧವಾಗಿರುತ್ತವೆ. ಅವೆಲ್ಲವುಗಳಲ್ಲಿ ಇಂದು ವಸತಿಯ ಸಮಸ್ಯೆಯೇ ಮುಖ್ಯವಾದುದು ಆಗಿದೆ. ಸ್ಥಳದ ಕೊರ ತೆಯ ಮೂಲಕ ಮತ್ತು ಹೆಚ್ಚಿನ ಬಾಡಿಗೆಯ ಮೂಲಕ ಅನೇಕ ಕುಟುಂಬ ಗಳು ಒಂದೇ ಮನೆಯಲ್ಲಿ ವಾಸಿಸುವ ಪ್ರಸಂಗಗಳು ಬಂದಿವೆ. ಇದರಿಂದ ಜನಸಂದಣಿಯು ಹೆಚ್ಚಾಗುತ್ತದೆ. ಬೀದಿಗಳು ಸ್ವಚ್ಛ ಉಳಿಯಲಾರವು. ರೋಗಗಳು ಮೇಲಿಂದಮೇಲೆ ಉದ್ಭವಿಸಿ ಭರದಿಂದ ಹಬ್ಬುತ್ತವೆ. ಸರಕಾರ ದವರು ಈ ಎಲ್ಲ ಅನರ್ಥಗಳನ್ನು ಹೋಗಲಾಡಿಸಿ, ವಸತಿಯ ಸೌಕರ್ಯ, ಶುದ್ಧ ನೀರಿನ ಪೂರೈಕೆ, ಆರೋಗ್ಯ ಮತ್ತು ಸ್ವಚ್ಛತೆಗಾಗಿ ಯೋಗ್ಯವಾದ ಏರ್ಪಾಡು, ಇವುಗಳ ಕಡೆಗೆ ಲಕ್ಷ್ಯವನ್ನು ಪೂರೈಸಲೇಕು. ಇವಲ್ಲದೆ ಶುದ್ಧ ವಾದ ಹಾಲು, ಆಹಾರಸಾಮಗ್ರಿ ಮುಂತಾದವುಗಳ ಪೂರೈಕೆಯ ಬಗ್ಗೆಯೂ ವಾಹನ ಸೌಕರ್ಯಗಳ ಬಗ್ಗೆಯೂ ತಕ್ಕ ವ್ಯವಸ್ಥೆಯನ್ನು ಮಾಡಬೇಕು.

ಆಡಳಿತೆಯ ಸೌಕರ್ಯಕ್ಕಾಗಿ ಅನೇಕ ಪಟ್ಟಣಗಳ ಹಾಗೂ ಹಳ್ಳಿ ಗಳ ಗುಂಪನ್ನು ಮಾಡಿ ತಾಲೂಕುಗಳನ್ನೂ, ಕೆಲವು ತಾಲೂಕುಗಳನ್ನು ಕೂಡಿಸಿ ಜಿಲ್ಹೆಯನ್ನೂ, ಮತ್ತು ಕೆಲವು ಜಿಲ್ಹೆಗಳನ್ನು ಕೂಡಿಸಿ ಪ್ರಾಂತ ಗಳನ್ನೂ ಮಾಡಲಾಗುತ್ತದೆ. ಇಂಥ ಕೆಲವು ಪ್ರಾಂತಗಳು ಕೂಡಿ ರಾಷ್ಟ್ರ ವಾಗುತ ವೆ.

## ವಿವಾಹ

ಇದರ ಉತ್ಪತ್ತಿಯ ಬಗ್ಗೆ ಸಂಪೂರ್ಣವಾದ ಮಾಹಿತಿಯನ್ನು ಕುಟುಂಬದ ಉತ್ಪತ್ತಿಯನ್ನು ಹೇಳುವಾಗ ಕೊಡಲಾಗಿದೆ.

ಇದು ಮಹತ್ವದ ಒಂದು ಸಾಮಾಜಿಕ ಸಂಸ್ಥೆ. ಈ ವಿವಾಹ ಪದ್ಧತಿಯಿಂದ ಮನುಷ್ಯನ ನೈಜಪ್ರವೃತ್ತಿಗಳಾದ ಲೈಂಗಿಕ ಪ್ರವೃತ್ತಿ, ಸಂತಾನಾಭಿಲಾಷೆ ಮುಂತಾದವುಗಳು ತೃಪ್ತಿಗೊಳ್ಳುತ್ತವೆ. ವಿವಾಹದಿಂದ ನಿಜವಾದ ಸೌಖ್ಯವು ಲಭಿಸಬೇಕಾದರೆ ಅದು ಕೇವಲ ಎರಡು ದೇಹಗಳ ಮಿಲನವಾಗದೆ ಎರಡು ಆತ್ಮಗಳ ಸುಂದರವಾದ ಸಮ್ಮಿಲನವಾಗಬೇಕು. ಪೀಳಿಗೆಯು ಶುದ್ಧವೂ ಆರೋಗ್ಯವುಳ್ಳದ್ದೂ ಉಳಿಯುವದಕ್ಕಾಗಿ ಮದುವೆಯಾಗುವವರು ನಿರೋಗಿಗಳಾಗಿರಬೇಕು.

ಸಾಮಾನ್ಯವಾಗಿ ಮದುವೆಯು ಕೆಲವೊಂದು ವಿಧಿಗಳಿಂದ ನೆರವೇರಿಸಲ್ಪಡುತ್ತದೆ. ಇವುಗಳ ಉದ್ದೇಶವೆಂದರೆ ವಿವಾಹವನ್ನು ಜಾಹೀರಪಡಿಸುವದೇ ಆಗಿರುತ್ತದೆ. ಇದಲ್ಲದೆ ವಿವಾಹಕ್ಕೆ ಒಂದು ಧಾರ್ಮಿಕ ಸಂಸ್ಕಾರದ ಸ್ವರೂಪವನ್ನು ಕೊಡುವದು ಇದ್ದೇ ಇರುತ್ತದೆ, ಕೆಲವೊಂದು ವಿಧಿಗಳು ಅರ್ಥಪೂರ್ಣವೂ ಆಗಿರುತ್ತವೆ. ದಂಪತಿಗಳ ಪಾಣಿಗ್ರಹಣ, ವಧೂವರರ ಕಂಕಣ ಬಂಧನ. ಮತ್ತು ವಸ್ತ್ರಬಂಧನ ಮುಂತಾದವುಗಳು ವಿವಾಹಿತರಾದವರ ಮಿಲನವು ಚಿರಕಾಲಬಂಧನಕಾರಕವಾದದ್ದೆಂದು ಸೂಚಿಸುತ್ತವೆ. ಅಕ್ಷತಾರೋಪಣೆಯು ವಿವಾಹವು ಸಫಲವಾಗಲೆಂದೂ ಸಂತಾನವು ಲಭಿಸಲೆಂದೂ ಸೂಚಿಸುತ್ತವೆ.

ವಿವಾಹವಾಗುವಾಗ ವಧೂವರರಿಗೆ ವಯಸ್ಸಿನ ನಿರ್ಬಂಧವನ್ನು ಹೇರುವದು ಅತ್ಯವಶ್ಯವು. ನಮ್ಮ ದೇಶದಲ್ಲಿ ಶಾರದಾ ಕಾಯದೆಯಮೇರೆಗೆ ವಧೂವರರ ವಯಸ್ಸು ಕನಿಷ್ಟ ಪಕ್ಷಕ್ಕೆ ೧೪ ಹಾಗೂ ೧೮ ಇರಬೇಕೆಂದು ನಿರ್ಧರಿಸಲಾಗಿದೆ. ವಧುವಿನ ವಯಸ್ಸನ್ನು ಇತ್ತೀಚಿಗೆ ೧೫ಕ್ಕೆ ಏರಿಸಲಾಗಿದೆ.

**ವಿವಾಹದ ಪ್ರಭೇದಗಳು.**

(೧) **ಸಂಘ ವಿವಾಹ ಪದ್ಧತಿ:—** (Group marriage) ಈ ಪದ್ಧತಿಯಲ್ಲಿ ಪುರುಷರ ಒಂದು ತಂಡವು ಸ್ತ್ರೀಯರ ಒಂದು ತಂಡದೊಡನೆ,

ಸಂಬಂಧವನ್ನಿಟ್ಟುಕೊಳ್ಳುತ್ತದೆ. ಈ ಸಂಬಂಧದಿಂದ ಹುಟ್ಟಿದ ಮಕ್ಕಳು ಒಬ್ಬ ಪುರುಷನ ಸೊತ್ತಾಗಿರದೆ ಇಡೀ ಗುಂಪಿಗೆ ಸೇರಿದವರಾಗುತ್ತಾರೆ. ಇದು ತಿಬೇಟ, ಸಿಂಹಳದ್ವೀಪ, ಹಿಮಾಲಯದ ಕೆಲವೊಂದು ಪ್ರದೇಶಗಳಲ್ಲಿ ಕಂಡುಬರುತ್ತದೆ.

(೨) ಬಹುಪತಿತ್ವ:— ( Polyanbry )

ಈ ಪದ್ಧತಿಯಲ್ಲಿ ಅನೇಕ ಪುರುಷರು ಒಬ್ಬಳೇ ಹೆಂಗಸನ್ನು ಮದುವೆಯಾಗುತ್ತಾರೆ ಸ್ತ್ರೀ ಸಂಖ್ಯೆಗಿಂತ ಪುರುಷರ ಸಂಖ್ಯೆಯು ಬಹಳವಾಗಿ ಹೆಚ್ಚಾಗಿರುವದೇ ಇದಕ್ಕೆ ಮುಖ್ಯವಾದ ಕಾರಣವು ಬಹಳ ಬಡತನ ಇಲ್ಲವೆ ಗಂಡನು ಕೆಲವು ನಿಮಿತ್ತದಿಂದ ಹೆಂಡತಿಯನ್ನು ಅಗಲಿರುವಾಗ ಉದ್ಭವಿಸಬಹುದಾದ ಸಂಕಟಗಳು ಸಹ ಇದಕ್ಕೆ ಕಾರಣಗಳು. ಈ ಪದ್ಧತಿಯು ತಿಬೇಟದ ಕೆಲವು ಭಾಗಗಳಲ್ಲಿ, ದಕ್ಷಿಣ ಹಿಂದುಸ್ತಾನದಲ್ಲಿದ್ದ ತೋಡರು ಮುಂತಾದ ಮುಂದುವರಿಯದೆ ಇದ್ದ ಜನರಲ್ಲಿ ಹಾಗೂ ರಶಿಯದ ಕೋಸಾಕ್ ಜನರಲ್ಲಿ ರೂಢವಾಗಿದೆ.

(೩) ಬಹುಪತ್ನೀತ್ವ:— ( Polygamy or Polygyny )

ಒಬ್ಬನು ಅನೇಕ ಹೆಂಡಂದಿರನ್ನು ಲಗ್ನವಾಗುವ ಪದ್ಧತಿ. ಈ ಪದ್ಧತಿಯನ್ನು ನಾವು ಜಗತ್ತಿನ ಎಲ್ಲ ಭಾಗಗಳಲ್ಲಿ ಕಾಣಬಹುದು. ಪುರುಷನಿಗೆ ವೈವಿಧ್ಯತೆಯ ಬಗ್ಗೆ ಇದ್ದ ಆಶೆ, ಸಂತಾನಾಭಿವೃದ್ಧಿಗಾಗಿ ಇದ್ದ ತೀವ್ರವಾದ ಆಕಾಂಕ್ಷೆ, ಐಶ್ವರ್ಯ ಹಾಗೂ ಪ್ರತಿಷ್ಠೆಯನ್ನು ಜನರಿಗೆ ತೋರಿಸುವ ಅಭಿಲಾಷೆ ಇವುಗಳಿಗಾಗಿ ಈ ಪದ್ಧತಿಯು ರೂಢವಾಗಿದೆ. ಆದರೆ ಇದರಿಂದ ಮನುಷ್ಯನಿಗೆ ನಿಜವಾದ ಸೌಖ್ಯವು ಲಭಿಸಲಾರದು; ಸವತಿಮಾತ್ಸರ್ಯದ ಮೂಲಕ ಮನೆಯಲ್ಲಿಯ ಶಾಂತಿ ಸಮಾಧಾನಗಳು ಅಳಿಯುತ್ತವೆ. ನಮ್ಮ ದೇಶದಲ್ಲಿ ಇತ್ತೀಚೆಗೆ ಈ ಪದ್ಧತಿಯನ್ನು ಕಾಯದೇಯಿಂದ ತಡೆಗಟ್ಟಲಾಗಿದೆ.

(೪) ಏಕಪತ್ನೀತ್ವ ಅಥವಾ ಏಕಪತಿತ್ವ:— ( Monogamy or Monogyny )

ಒಬ್ಬ ಪುರುಷನು ಒಬ್ಬ ಸ್ತ್ರೀಯಳನ್ನೇ ಮದುವೆಯಾಗುವ ಪದ್ಧತಿ. ಇದು ಎಲ್ಲ ಪದ್ಧತಿಗಳಲ್ಲಿ ಅತ್ಯುತ್ತಮವಾದುದರಿಂದ ಸರ್ವಮಾನ್ಯವಾಗಿದ್ದು

ಜಗತ್ತಿನ ಎಲ್ಲ ಭಾಗಗಳಲ್ಲಿ ಪ್ರಚುರವಾಗಿರುತ್ತದೆ. ಈ ಪದ್ಧತಿಯಲ್ಲಿಯೇ ಎರಡು ಆತ್ಮಗಳ ನಿಜವಾದ ಸಂಕಲನೆ ಹಾಗೂ ಮಕ್ಕಳ ಯೋಗ್ಯವಾದ ಯೋಗಕ್ಷೇಮವು ಸಾಧ್ಯವು.

**ವಿವಾಹದ ಕಟ್ಟಳೆಗಳು** (Endogamy and Exogamy):—

ಜೊತೆಗಾರರನ್ನು ಆರಿಸುವಾಗ ಕೆಲವೊಂದು ಕಟ್ಟಳೆಗಳುಂಟು. ಈ ಕಟ್ಟಳೆಗಳನ್ನು ಸ್ಥೂಲವಾಗಿ ಎರಡು ರೀತಿಯಾಗಿ ವಿಭಾಗಿಸಬಹುದು. ಒಂದು ನಿರ್ದಿಷ್ಟವಾದ ಮೇರೆಯನ್ನು ಮೀರಿ ಲಗ್ನವಾಗಬಾರದೆನ್ನುವ ಕಟ್ಟಳೆಗಳಿಗೆ 'Endogamy' ಎಂಬ ಹೆಸರಿದೆ. ಆದರೆ ಈ ನಿರ್ದಿಷ್ಟವಾದ ಮೇರೆಯ ಕಕ್ಷೆಯಲ್ಲಿಯೇ ಸೇರುವ ಎಲ್ಲರನ್ನೂ ಲಗ್ನವಾಗಲು ಬರುವದಿಲ್ಲ. ಅದರೊಳಗೆ ಒಂದು ವಿಸಿಷ್ಟ ಗುಂಪು ಇದ್ದು, ಆ ಗುಂಪಿನಿಂದ ಜೊತೆಗಾರರನ್ನು ಆರಿಸಲು ಬರುವದಿಲ್ಲ. ಇದಕ್ಕೆ 'Exogamy' ಎಂಬ ಹೆಸರು. ಇವು ಅನುಕ್ರಮವಾಗಿ ಹಿಂದೂ ಸಮಾಜದಲ್ಲಿ ಅಂತರ್ಜಾತೀಯ ವಿವಾಹಕ್ಕಿದ್ದ (inter-caste marriage) ತಡೆ ಹಾಗೂ ಸಗೋತ್ರ ವಿವಾಹದ ವಿಷಯದಲ್ಲಿರುವ ಧಾರ್ಮಿಕ ನಿರ್ಬಂಧಗಳನ್ನು ಹೋಲುತ್ತವೆ. ಉದಾಹರಣಾರ್ಥವಾಗಿ, ಹಿಂದೂ ಸಮಾಜದಲ್ಲಿ ಒಬ್ಬ ಬ್ರಾಹ್ಮಣನಿಗೆ ಧಾರ್ಮಿಕ ವಿಧಿಯ ಮೇರೆಗೆ ಬೇರೊಂದು ಜಾತಿಯವಳೊಡನೆ ಲಗ್ನವಾಗಲು ಬರುವದಿಲ್ಲ. ಅದರಂತೆ ಬ್ರಾಹ್ಮಣ ಜಾತಿಯಲ್ಲಿಯೂ ಕೂಡ 'ಸಗೋತ್ರ, ಸಪ್ರವರ, ಸಪಿಂಡ' ವರ್ಗಕ್ಕೆ ಸೇರಿದ ಕನ್ಯೆಯನ್ನು ವರಿಸಲು ಬರುವದಿಲ್ಲ [ಆದರೆ ಇತ್ತೀಚೆಗೆ ಸಗೋತ್ರ ವಿವಾಹಕ್ಕೆ ಕಾಯ್ದೆಯ ಮನ್ನಣೆ ದೊರೆತಿದೆ.]

ವಿವಾಹದ ಈ ಕಟ್ಟಳೆಗಳು ಒಂದರೊಳಗೆ ಒಂದರಂತಿರುವ ವರ್ತುಲಗಳಂತಿವೆ. ಒಳಗಿನ ವರ್ತುಳದ ಕ್ಷೇತ್ರದಿಂದ ಜೊತೆಗಾರರನ್ನು ಆರಿಸುವಂತಿಲ್ಲ. (ಇದು Exogamy) ಆದರಂತೆ ಹೊರಗಿನ ವರ್ತುಲವನ್ನು ಮೀರಿಯೂ ಜೊತೆಗಾರರನ್ನು ಆರಿಸಕೂಡದು. (ಇದು Endogamy) ಅಂತೂ ಎರಡೂ ವರ್ತುಲಗಳ ನಡುವೆ ಇರುವ ಕ್ಷೇತ್ರದಿಂದಲೇ ಜೊತೆಗಾರರನ್ನು ಆರಿಸಬೇಕಾಗುವದು.

ಈರೀತಿಯಾಗಿ ವಿವಾಹಕ್ಕೆ ಇಬ್ಬಗೆಯ ಕಟ್ಟಳೆಗಳು ಎಲ್ಲ ಸಮಾಜಗಳಲ್ಲಿಯೂ ಉಂಟು. ಆದರೆ ಅವುಗಳ ಕ್ಷೇತ್ರ ಮಾತ್ರ ಭಿನ್ನ ಭಿನ್ನವಿರ

ಬಹುದು. ಉದಾ:—ಕಕ್ಕನ ಮಕ್ಕಳೊಡನೆ ವಿವಾಹವು ಹಿಂದೂ ಧರ್ಮದಲ್ಲಿ ನಿಷೇಧಿಸಲ್ಪಟ್ಟದೆ; ಆದರೆ ಮುಸಲ್ಮಾನ ಧರ್ಮದಲ್ಲಿ ಅದಕ್ಕೆ ವಿಶೇಷ ಮಾನ್ಯತೆ ಇದೆ ಈ ಎಲ್ಲ ಕಟ್ಟಳೆಗಳು ಉತ್ತಮ ಸಂತಾನಶಾಸ್ತ್ರದ ಮೇಲೆ ಆಧಾರ ಭೂತವಾಗಿದೆ.

## ಮದುವೆಯ ಭವಿತವ್ಯತೆ

ವಿವಾಹ ಸಂಸ್ಥೆಯು ಚಿರವಾಗಿ ಬಾಳುವದರಲ್ಲಿ ಸಂದೇಹವಿಲ್ಲ. ಮತ್ತು ಏಕ ಪತ್ನೀತ್ವ ಪದ್ಧತಿಯೇ ಉತ್ತಮವಾದುದು. ಮತ್ತು ಹಿತಕರವಾದುದು ಎಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಬಾಲವಿವಾಹ ಪದ್ಧತಿ ಮತ್ತು ವಿಧವಾ ವಿವಾಹ ಪದ್ಧತಿಯ ಮೇಲಿನ ನಿರ್ಬಂಧ ಇವು ವಿವಾಹ ಪದ್ಧತಿಯೊಳಗಿಂದ ಕಿತ್ತುಹಾಕಲೇಬೇಕಾದ ದೋಷಗಳು.

ವಿವಾಹದ ಸ್ಥಿರತೆ ಮತ್ತು ಧ್ಯೇಯದ ಬಗ್ಗೆ ಬೇರೆ ಬೇರೆ ಅಭಿಪ್ರಾಯಗಳಿವೆ. ವಿವಾಹವು ಒಂದು ಪವಿತ್ರವಾದ ಧಾರ್ಮಿಕ ಸಂಸ್ಕಾರವೆಂತಲೂ ವಿವಾಹ ವಿಚ್ಛೇದನೆಗೆ ಅವಕಾಶವೇ ಇರಕೂಡದೆಂತಲೂ ಸನಾತನಿ ಮತವಿದೆ ಇದಕ್ಕೆ ಪ್ರತಿಯಾಗಿ ಪುರೋಗಾಮಿಗಳು ವಿವಾಹವೆಂದರೆ ವೈಯಕ್ತಿಕ ವಿಷಯವೆಂತಲೂ ವಿವಾಹ ವಿಚ್ಛೇದನೆಗೆ ಸಂಪೂರ್ಣವಾದ ಅವಕಾಶವಿರಬೇಕೆಂತಲೂ ಪ್ರತಿಪಾದಿಸುತ್ತಾರೆ. ಮನೆಯೊಳಗೆ ಮೇಲಿಂದಮೇಲೆ ತಿಕ್ಕಾಟ ಉಂಟಾದಲ್ಲಿ ಕೌಟುಂಬಿಕ ಸೌಖ್ಯವು ದೊರೆಯಲಾರದು. ಮತ್ತು ಇವಲ್ಲದೆ ಇದರಿಂದ ಚಿಕ್ಕ ಮಕ್ಕಳ ಮೇಲೆ ದುಷ್ಪರಿಣಾಮವಾಗುವದರಿಂದ ವಿವಾಹ ವಿಚ್ಛೇದನೆಯ ಅವಶ್ಯಕತೆಯಿದೆ ಎಂದು ಇವರು ವಾದಿಸುತ್ತಾರೆ.

ಈ ಸಂದರ್ಭದಲ್ಲಿ ಮಧ್ಯಮ ಮಾರ್ಗವನ್ನು ಅವಲಂಬಿಸುವದೇ ಮೇಲು. ವಿವಾಹದ ಕಟ್ಟಳೆಗಳಲ್ಲಿ ಸುಧಾರಣೆಯಾಗಬೇಕು ಸಾಮಾನ್ಯವಾಗಿ ವಿವಾಹದ ಸ್ಥಿರತೆಯು ನಿಸರ್ಗನಿಯಮವೆಂದು ತಿಳಿಯಬೇಕು, ಆದರೆ ಸಂಪೂರ್ಣವಾಗಿ ಕೂಡಿ ನಡೆಯದಲ್ಲಿ ಕೊನೆಯ ಉಪಾಯವೆಂದು ವಿವಾಹ ವಿಚ್ಛೇದನೆಯನ್ನು ಕೈಕೊಳ್ಳಬೇಕು. ಕೌಟುಂಬಿಕ ಸೌಖ್ಯವು ದೊರೆಯುವದಕ್ಕಾಗಿ ಜೊತೆಗಾರರನ್ನು ಆರಿಸುವ ವಿಷಯದಲ್ಲಿ ಸ್ವಾತಂತ್ರ್ಯವಿರಬೇಕು.

ಸ್ತ್ರೀಗೆ ಪುರುಷನಷ್ಟೇ ಸ್ಥಾನವಿರಬೇಕು. ಮದುವೆಯು ವೈಯಕ್ತಿಕ ವಿಚಾರಕ್ಕೆ ಸಂಪೂರ್ಣವಾದ ಅವಕಾಶವನ್ನು ಕಲ್ಪಿಸಬೇಕು. ಅದು ಸಾಮಾಜಿಕ ನಿರ್ಬಂಧಕ್ಕೆ ಒಳಗಾಗಿರಬೇಕು. ಆದರೆ ದುರ್ದೈವದಿಂದ ಹಿಂದುಸ್ತಾನದಲ್ಲಿ ಸ್ತ್ರೀಗೆ ಯೋಗ್ಯವಾದ ಸ್ಥಾನವು ದೊರೆತಿರುವುದಿಲ್ಲ. ಮತ್ತು ನಮ್ಮ ದೇಶದಲ್ಲಿ ಸಂತಾನದ ಶ್ರೇಷ್ಠತೆ ಮತ್ತು ಸಂಖ್ಯೆಯು ವಿಷಯದಲ್ಲಿ ನಿಯಂತ್ರಣವು ಇರುವದಿಲ್ಲ. ಆದ್ದರಿಂದ ವಿವಾಹದ ಕಟ್ಟಳೆಗಳಲ್ಲಿ ಯೋಗ್ಯವಾದ ಸುಧಾರಣೆಗಳು ಆಗಲೇಬೇಕು.

## ಆಸ್ತಿ:— (Property)

**ಕುಟುಂಬ ಮತ್ತು ಆಸ್ತಿ :—** ಮನುಷ್ಯನು ಏಕಾಕಿಯಾಗಿ ಜೀವನವನ್ನು ಸಾಗಿಸುತ್ತಿರುವಾಗ, ಆಸ್ತಿಯ ಅವಶ್ಯಕತೆಯು ಅಷ್ಟೊಂದು ಇರುವದಿಲ್ಲ. ಆದರೆ ಆತನಿಗೆ ಮಕ್ಕಳು ಮರಿಗಳಾಗಿ ಆತನ ಪ್ರಪಂಚವು ವಿಸ್ತಾರ ಹೊಂದಿದಂತೆ ಆತನ ಅವಶ್ಯಕತೆಗಳು ಹೆಚ್ಚುತ್ತವೆ ಮತ್ತು ಈ ಬೇಡಿಕೆಗಳನ್ನು ಪೂರೈಸುವದಕ್ಕಾಗಿ ಆಸ್ತಿಯ ಅವಶ್ಯಕತೆಯು ಬಹಳೇ ಇದೆ.

ಹೀಗೆ ಕುಟುಂಬ ಮತ್ತು ಆಸ್ತಿ ಇವುಗಳ ನಡುವೆ ನಿಕಟವಾದ ಸಂಬಂಧವುಂಟು.

ಆಸ್ತಿಯ ಹಕ್ಕೆಂದರೆ ಒಬ್ಬ ವ್ಯಕ್ತಿಯು ಇಲ್ಲವೆ ಕೆಲವು ವ್ಯಕ್ತಿಗಳು ಯಾವದೊಂದು ಪದಾರ್ಥವನ್ನು ವಶದಲ್ಲಿ ಇಟ್ಟುಕೊಳ್ಳುವ ಮತ್ತು ಬೇರೆ ಯಾರೂ ಅಡ್ಡಬರದಂತೆ ಅದನ್ನು ಉಪಭೋಗಿಸುವ ಹಕ್ಕು. ಈ ಹಕ್ಕು ಸಮಾಜದ ಮಾನ್ಯತೆಯನ್ನು ಪಡೆದಿರುತ್ತದೆ. ಅಂತೆಯೇ ಒಬ್ಬ ವ್ಯಕ್ತಿಗೆ ಇಲ್ಲವೆ ಕೆಲವು ವ್ಯಕ್ತಿಗಳಿಗೆ ಆಸ್ತಿಯ ಉಪಯೋಗವಾಗುತ್ತದೆ. ಯಾವದೇ ಒಂದು ವಸ್ತುವು ಒಬ್ಬನ ವಶದಲ್ಲಿದ್ದಮಾತ್ರಕ್ಕೆ ಅದು ಆತನ ಆಸ್ತಿ ಆಗಲಾರದು. ಬೇರೆಯವರಿಂದ ಕಡತಂದ ಪುಸ್ತಕ, ಇಲ್ಲವೆ ಬೇರೆ ಯಾವದೊಂದು ಪದಾರ್ಥವು ಒಬ್ಬರ ವಶದಲ್ಲಿ ಕೆಲಕಾಲವಿರಬಹುದು. ಅದನ್ನು ಅವನು ಉಪಯೋಗಿಸಬಹುದು. ಆದರೆ ಇಷ್ಟರಿಂದಲೇ ಆ ವಸ್ತುವು ಕಡತಂದವನ ಆಸ್ತಿಯಾಗಲಾರದು. ಆ ಪದಾರ್ಥದ ವಿಷಯದಲ್ಲಿ ಸಂಪೂರ್ಣವಾದ ಮಾಲಕೀ ಹಕ್ಕು ಇದ್ದರೆ ಮಾತ್ರ ಅದು ಆತನ ಆಸ್ತಿಯೆನಿಸುವದು.

ಆಸ್ತಿಯ ಹಕ್ಕೆಂದರೆ ಅದರಲ್ಲಿ ಸಾಮಾನ್ಯವಾಗಿ ೫ ಅಂಶಗಳು ಅಡಕವಾಗಿರುತ್ತವೆ. ಅವು ಯಾವವೆಂದರೆ.

i) ಬೇರೆಯವರಿಗೆ ಕಾಣಿಕೆಯಾಗಿ ಕೊಡುವ ಹಕ್ಕು.

ii) ಕೆಲವು ಕರಾರಿನ ಮೇಲೆ ಬೇರೆಯವರಿಗೆ ಕೊಡುವ ಹಕ್ಕು.

iii) ಅದನ್ನು ಉಪಯೋಗಿಸುವ ಹಕ್ಕು.

iv) ಮೃತ್ಯುಪತ್ರದ ಮೂಲಕ ಬೇರೆಯವರಿಗೆ ಬಿಡುವ ಹಕ್ಕು.

v) ಸಂಗ್ರಹಿಸುವ ಹಕ್ಕು.

ಅತಿ ಪ್ರಾಚೀನ ಕಾಲದಲ್ಲಿ ಉಡುಗೆ, ತೊಡಿಗೆ, ಆಭರಣಗಳು, ಆಯುಧಗಳು, ಮುಂತಾದ ವಿಷಯದಲ್ಲಿ ಮಾತ್ರ ಆಸ್ತಿಯ ಹಕ್ಕು ಇರುತ್ತಿತ್ತು. ಮಾನವನು ಬೇಟೆಯಾಡಿ ಹೊಟ್ಟೆ ತುಂಬಿಕೊಳ್ಳುವಾಗ ರಕ್ತಸಂಬಂಧವುಳ್ಳ ಕೆಲವು ಜನರು ಒಂದು ವಿಶಿಷ್ಟವಾದ ಪ್ರದೇಶವನ್ನು ಆಕ್ರಮಿಸಿ ಅದರಲ್ಲಿ ಬೇಟೆಯಾಡುತ್ತಿದ್ದರು. ಮತ್ತು ಆ ಪ್ರದೇಶವು ಅವರ ಆಸ್ತಿಯಾಗುತ್ತಿತ್ತು. ಬೇಟೆಯಾಡಿದ ಪ್ರಾಣಿಗಳನ್ನು ಅವರು ತಮ್ಮೊಳಗೆ ಸರಿಯಾಗಿ ಹಂಚಿಕೊಳ್ಳುತ್ತಿದ್ದರು.

ಮುಂದೆ ಮಾನವನು ಸುಧಾರಿಸಿ ಒಕ್ಕಲತನವನ್ನು ಪ್ರಾರಂಭಿಸಿದ ಕೂಡಲೇ ಭೂಮಿಯು ಒಂದು ಪಂಗಡದ ಸಾಮಾನ್ಯ ಸೊತ್ತಾಗಿತ್ತು. ಆದರೆ ಅದರಲ್ಲಿ ಭಾಗಗಳನ್ನು ಮಾಡಿ ಬೇರೆ ಬೇರೆ ಕುಟುಂಬಗಳಿಗೆ ಅವನ್ನು ಸಾಗುವಳಿ ಮಾಡುವದಕ್ಕಾಗಿ ಕೊಡಲಾಗುತ್ತಿತ್ತು. ಬೇರೆ ಬೇರೆ ಭಾಗಗಳನ್ನು ಕೆಲವು ಕಾಲ ಸಾಗುಮಾಡುವದರಿಂದ ಅವು ಆಯಾ ಕುಟುಂಬಗಳ ಆಸ್ತಿಯಾಗುತ್ತಿದ್ದವು. ಬರಬರುತ್ತ ಭೂಮಿಯ ಸ್ವಾಮಿತ್ವವು ಕೆಲವು ವಿಶಿಷ್ಟ ಜನರ ಕೈಯಲ್ಲಿಯೇ ಹೋಯಿತು. ಮತ್ತು ಉಳಿದವರು ಆ ಭೂಮಿಯ ಮೇಲೆ ದುಡಿಯುವ ಆಳುಗಳಾದರು, ಹೀಗೆ ಸಮಾಜದಲ್ಲಿ ಭೂಮಿಯ ಮೇಲೆ ಸಂಪೂರ್ಣ ಹಕ್ಕುಳ್ಳ ಜಮೀನದಾರರು ಮತ್ತು ಭೂಮಿಯ ಮೇಲೆ ಹೊಟ್ಟೆಯ ಪಾಡಿಗಾಗಿ ದುಡಿಯುವ ಗುಲಾಮರು (Serfs) ಹೀಗೆ ಎರಡು ವರ್ಗಗಳಾದವು.

ಆಧುನಿಕ ಕಾಲದಲ್ಲಿ ಒಕ್ಕಲತನಕ್ಕಿಂತಲೂ ಉದ್ಯೋಗಕ್ಕೆ ಮಹತ್ವ ಹೆಚ್ಚು. ಔದ್ಯೋಗಿಕರಣದ ಪ್ರಾರಂಭದಲ್ಲಿ ಉತ್ಪಾದನೆಯ ಸಾಧನಗಳು

ಪ್ರತಿಯೊಬ್ಬನ ಕೈಯಲ್ಲಿಯೂ ಇದ್ದವು. ಆದರೆ ಕಾಲಾಂತರದಿಂದ ಔದ್ಯೋಗೀಕರಣದ ಜೊತೆಗೆ ಯಾಂತ್ರೀಕರಣವು ದೊಡ್ಡ ಪ್ರಮಾಣದಲ್ಲಿ ಸಾಗಹತ್ತಿದ ಕೂಡಲೆ, ಉತ್ಪಾದನೆಯ ಸಾಧನಗಳು ಕೆಲವೊಂದು ವರ್ಗದವರ ಸ್ವಾಧೀನದಲ್ಲಿಯೇ ಹೋದವು. ಇವರೇ ಮುಂದೆ ಬಂಡವಲುಗಾರರಾದರು. ಮತ್ತು ಉಳಿದವರು ಇವರ ಕೆಳಗೆ ದುಡಿಯುವ ಕೂಲಿಕಾರರಾದರು.

ಆಸ್ತಿಗಳಲ್ಲಿ ನಾವು ಸ್ಥೂಲವಾಗಿ ಮೂರು ಭಾಗಗಳನ್ನು ಮಾಡಬಹುದು. ಸಾಮೂಹಿಕ (common), ಸಾಂಘಿಕ (collective) ಮತ್ತು ವೈಯಕ್ತಿಕ (indieidual) ಸಾಮೂಹಿಕ ಆಸ್ತಿಗಳಲ್ಲಿ ಅನೇಕ ವ್ಯಕ್ತಿಗಳ ಸಮೂಹಕ್ಕೇನೆ ಕೆಲವೊಂದು ವಸ್ತುಗಳ ಬಗ್ಗೆ ಹಕ್ಕು ಇರುತ್ತದೆ. ಆ ಸಮೂಹದಲ್ಲಿರುವ ಎಲ್ಲ ವ್ಯಕ್ತಿಗಳಿಗೂ ಆ ಆಸ್ತಿಗಳ ಉಪಯೋಗ ಮಾಡಿಕೊಳ್ಳಲು ಬರುತ್ತದೆ. ಆ ಸಮೂಹದಲ್ಲಿ ಸೇರದೇ ಇದ್ದ ಯಾವ ವ್ಯಕ್ತಿಗೂ ಈ ವಸ್ತುಗಳಲ್ಲಿ ಪಾಲು ದೊರಕದು. ಸರಕಾರೀ ಇಲ್ಲವೇ ಖಾಸಗೀ ಸಂಘಗಳಿಗೆ ಸೇರಿದ ಆಸ್ತಿಗೆ ಸಾಂಘಿಕ ಆಸ್ತಿ ಎನ್ನುತ್ತಾರೆ. ಸಂಪೂರ್ಣವಾಗಿ ವ್ಯಕ್ತಿಯ ಆಧೀನದಲ್ಲಿರುವ ಆಸ್ತಿಗೆ ವೈಯಕ್ತಿಕ ಆಸ್ತಿ ಎನ್ನುವರು.

ಈಗಿನ ಕಾಲದಲ್ಲಿ ವೈಯಕ್ತಿಕ ಆಸ್ತಿಯೇ ಚರ್ಚೆಯ ಮುಖ್ಯ ವಿಷಯವಾಗಿದೆ. ಕೆಲವರು ಅದನ್ನು ಬಲವಾಗಿ ಉತ್ಸಾಹದಿಂದ ಪುರಸ್ಕರಿಸುತ್ತಾರೆ. ಬೇರೆ ಕೆಲವರು ಅದನ್ನು ಬಲವಾಗಿ ವಿರೋಧಿಸುತ್ತಾರೆ.

**ಪುರಸ್ಕರ್ತರ ಪ್ರತಿಪಾದನೆಗಳು:—**

(೧) ವೈಯಕ್ತಿಕ ಆಸ್ತಿ ಇಲ್ಲದೇ ಹೋದರೆ ಸ್ವತಂತ್ರ ಜೀವನವು ಸಾಧ್ಯವಾಗುವದಿಲ್ಲ. ಉದ್ದೇಶಪೂರಿತವಾದ, ಸುಸಂಸ್ಕೃತವಾದ, ಮತ್ತು ಕಲಾಪೂರ್ಣವಾದ ಜೀವನಕ್ಕೆ ವೈಯಕ್ತಿಕ ಆಸ್ತಿಯು ಆವಶ್ಯಕವು. ಆಸ್ತಿ ಇಲ್ಲದ ಮಾನವ ಜೀವನವು ಪಶುಜೀವನವನ್ನು ಹೋಲುವದು. ಮತ್ತು ಮನುಷ್ಯನು ಬಾಳಿದರೂ ಜೀವನದ ಗುರಿಯನ್ನು ಮುಟ್ಟಲಾರನು

(೨) ಮನುಷ್ಯನಿಂದ ಜೀವನಕ್ಕೆ ಅವಶ್ಯಕವಾದ ಪದಾರ್ಥಗಳನ್ನು ಉತ್ಪಾದಿಸುವದಕ್ಕಾಗಿ ಅವನನ್ನು ಸಾಧ್ಯವಿದ್ದಷ್ಟು ದುಡಿಯಲು ಹಚ್ಚಬೇಕಾದರೆ ಅವನಿಗೆ ಒಂದು ಬಗೆಯ ಆಕರ್ಷಣೆ ಇರಬೇಕು. ವೈಯಕ್ತಿಕ ಆಸ್ತಿಯಲ್ಲಿ ಆಕರ್ಷಣಶಕ್ತಿ ಇದೆ.

(೩) ಆಸ್ತಿ ಇದ್ದರೆ ಮಾತ್ರ ಮನುಷ್ಯನಿಗೆ ತನ್ನ ಕೊರತೆಗಳನ್ನು ನೀಗಿ ಕೊಳ್ಳಲು ಸಾಧ್ಯವಾಗುತ್ತದೆ. ಅದು ಇರದೇ ಹೋದರೆ ಅವನು ಉಪವಾಸ ಬೀಳುವ ಪ್ರಸಂಗ ಬಂದು ಜೀವನವು ತುಂಬಾ ಕಷ್ಟಮಯವಾಗುವ ಸಂಭವ ವಿದೆ. ಸಂಕಟ ಸಮಯದಲ್ಲಿ—ಬೇನೆ, ಮುಪ್ಪು, ನಿರುದ್ಯೋಗತನ ಮುಂತಾ ದವುಗಳಲ್ಲಿ ಆಸ್ತಿಯು ಮನುಷ್ಯನಿಗೆ ದೊಡ್ಡ ಆಧಾರವಾಗುತ್ತದೆ. ಅವನಿಗೆ ಮನಶಾಂತಿಯು ಲಭಿಸುತ್ತದೆ.

(೪) ಶೀಲವನ್ನು ಕಾಯ್ದುಕೊಳ್ಳುವದಕ್ಕಾಗಿ ಮತ್ತು ಅದನ್ನು ಸಂವ ರ್ಧಿಸುವದಕ್ಕಾಗಿ ಇದರಿಂದ ತುಂಬಾ ಸಹಾಯವಾಗುತ್ತದೆ. ಆಸ್ತಿ ಇದ್ದವನು ತನ್ನ ಜೀವನಕ್ಕೆ ಪರರ ಮುಖಸ್ತುತಿಯನ್ನು ಮಾಡಬೇಕಾಗಿಲ್ಲ. ಅವನ ನ್ಯಾಯದಿಂದ ನಡೆಯಬಲ್ಲನು.

(೫) ಆಸ್ತಿಯುಳ್ಳವನು ಯಾವಾಗಲೂ ಜಾಣ್ಮೆಯಿಂದ ಮತ್ತು ಜಾಗ ರೂಕತೆಯಿಂದ ವರ್ತಿಸುತ್ತಾನೆ. ದೇಶದಲ್ಲಿ ಆಗುವ ಪ್ರಕ್ಷೋಭಗಳಿಗೆ ಅವನು ಪ್ರೋತ್ಸಾಹನವನ್ನು ಕೊಡುವದಿಲ್ಲ.

(೬) ಆಸ್ತಿ ಇಲ್ಲದೆ ಮನುಷ್ಯನು ಪರೋಪಕಾರಿಯಾಗಲಾರನು. ಮತ್ತು ಬೇರೆಯವರ ಆದರಾತಿಥ್ಯ ಮಾಡಲಾರನು, ತನ್ನ ಹೊಟ್ಟೆಯನ್ನೇ ತುಂಬಿಸಿಕೊಳ್ಳಲಾರದವನು ಪರರ ಸಂಕಟಗಳನ್ನು ಪರಿಹರಿಸಬಲ್ಲನೆ?

(೭) ಆಸ್ತಿಯ ಆಶೆಯು ಮನುಷ್ಯನನ್ನು ಮಿತವ್ಯಯನನ್ನಾಗಿ ಮಾಡಿ ಉಳಿತಾಯವನ್ನು ಮಾಡಹಚ್ಚುತ್ತದೆ. ಮತ್ತು ಅದರಿಂದ ಸಮಾಜದ ಒಟ್ಟು ಆಸ್ತಿಯು ಬೆಳೆಯುತ್ತದೆ.

(೮) ಪದಾರ್ಥಗಳನ್ನು ಸಂಗ್ರಹಿಸುವದು ಮನುಷ್ಯನ ಒಂದು ಸಹಜ ಪ್ರವೃತ್ತಿಯು (instinct). ಈ ವೃತ್ತಿಯು ಆಸ್ತಿಯ ಸಂಪಾದನೆಯಿಂದ ತೃಪ್ತಿಗೊಳ್ಳುತ್ತದೆ.

**ವಿರೋಧಕರ ಆಪಾದನೆಗಳು:—**

(೧) ಆಸ್ತಿಗಾಗಿ ಕೆಲವು ಜನರು ಬಹು ಜನರ ಆರ್ಥಿಕ ಶೋಷಣೆ ಮಾಡುವ ಸಂಭವವಿದೆ. ಇದರಿಂದ ಕೆಲವರು ಲಕ್ಷಾಧೀಶರಾಗುವರು. ಆದರೆ ಅನೇಕರು ಭಿಕ್ಷಾಪತಿಗಳಾಗುವರು. ಶ್ರೀಮಂತರಿದ್ದವರಿಗೆ ಅನುಕೂಲವಾದ ಹಿನ್ನೆಲೆ ಇರುವದರಿಂದ ಅವರ ಸಂಪತ್ತು ಬೆಳೆಯುತ್ತ ಹೋಗುತ್ತದೆ. ಆದರೆ

ಹಣದ ಅಭಾವವಿದ್ದವರಿಗೆ ಸ್ವಲ್ಪವಾದರೂ ಹಣವು ಮುಟ್ಟುವದಿಲ್ಲ ಹೀಗಾಗಿ ಸಮಾಜದಲ್ಲಿ "ಆಸ್ತಿ ಇದ್ದವರು" ಮತ್ತು "ಆಸ್ತಿ ಇಲ್ಲದವರು" ಎಂಬ ಎರಡು ವಿರುದ್ಧ ವರ್ಗಗಳು ಹುಟ್ಟುವವು.

(೨) ಉಪಯುಕ್ತತೆಯ ದೃಷ್ಟಿಯಿಂದಲೂ ವೈಯಕ್ತಿಕ ಆಸ್ತಿಯು ಅಸಮರ್ಥನೀಯವು. ಶ್ರೀಮಂತರ ಮಕ್ಕಳು ಸದ್ಗುಣಿಗಳಾಗಿರುವದು ವಿರಳ ಯಾವ ಶ್ರಮವನ್ನೂ ವಹಿಸದೇ ತಂದೆಯ ಆಸ್ತಿಯು ಉಪಭೋಗಿಸಲು ಸಿಕ್ಕುವದರಿಂದ ಅವರು ಅನೇಕ ದುಶ್ಚಟಗಳಿಗೆ ಬಲಿಬಿದ್ದು ತಮ್ಮ ಸಂಪತ್ತನ್ನು ಹಾಳು ಮಾಡುತ್ತಾರೆ.

(೩) ಆಸ್ತಿಯು ಮನುಷ್ಯನಲ್ಲಿ ಒಂದು ಬಗೆಯ ಟೊಳ್ಳು ಆತ್ಮಪ್ರತಿಷ್ಠೆಯನ್ನು ಹುಟ್ಟಿಸುತ್ತದೆ. ಶ್ರೀಮಂತರು ತಾವೇ ಶ್ರೇಷ್ಠರೆಂತಲೂ ಉಳಿದವರು ಕೀಳು ಎಂತಲೂ ಭಾವಿಸುತ್ತಾರೆ.

(೪) ಬೇರೆಯವರ ರಕ್ತವನ್ನು ಹೀರಿ ಅಪ್ರಾಮಾಣಿಕತನದಿಂದ ಸಂಪತ್ತನ್ನು ಸಂಪಾದಿಸುವ ಪ್ರವೃತ್ತಿಯು ಇತ್ತೀಚೆಗೆ ಹೆಚ್ಚಾಗಿದೆ. ಮತ್ತು ಇದರಿಂದ ಅಹಂಕಾರ, ಅಸಹಿಷ್ಣುತೆ, ಅಪ್ರಾಮಾಣಿಕತನ ಮುಂತಾದ ದುರ್ಗುಣಗಳು ಬೆಳೆಯುತ್ತವೆ.

(೫) ಸಂಪತ್ತುಳ್ಳ ಜನರು ಚುನಾವಣೆಗಳ ಕಾಲಕ್ಕೆ ತಮ್ಮ ದ್ರವ್ಯ ಬಲದಿಂದ ಮತಗಳನ್ನು ಸಂಪಾದಿಸಿ ತಮ್ಮ ಪಕ್ಷಗಳನ್ನು ಬಲಪಡಿಸಿಕೊಂಡು ರಾಜ್ಯಸೂತ್ರಗಳನ್ನು ತಮ್ಮ ಕೈಯಲ್ಲಿ ತೆಗೆದುಕೊಳ್ಳುತ್ತಾರೆ. ಮತ್ತು ಇತರರ ಮೇಲೆ ತಮ್ಮ ದರ್ಪವನ್ನು ನಡೆಯಿಸುತ್ತಾರೆ. ಸಂಪತ್ತಿನ ಸರಿಯಾದ ಹಂಚುವಿಕೆ ಮತ್ತು ವೈಯಕ್ತಿಕ ಆಸ್ತಿಯ ಮೇಲೆ ನಿಯಂತ್ರಣ ಇವು ಇಲ್ಲದೇ ಹೋದರೆ ಪ್ರಜಾಪ್ರಭುತ್ವವು ಹೆಸರಿಗೆ ಮಾತ್ರ ಉಳಿಯುವದು.

(೬) ಆಸ್ತಿಯುಳ್ಳವರು, ಪರಿಸ್ಥಿತಿಯು ಇದ್ದಂತೆ ಇರಬೇಕೆಂದು ಅಭಿಪ್ರಾಯವುಳ್ಳವರಾಗಿದ್ದರಿಂದ ಅನ್ಯಾಯಗಳನ್ನು ದೂರಮಾಡುವ ಬದಲು ಪ್ರಗತಿಯ ಮಾರ್ಗದಲ್ಲಿ ಆತಂಕಗಳನ್ನು ಒಡ್ಡುತ್ತಾರೆ.

**ಆಸ್ತಿಯ ಭವಿತವ್ಯ:—**ರಶಿಯಾದಲ್ಲಿ ಸಮತಾವಾದವು ಪ್ರಚಾರದಲ್ಲಿ ಬಂದಾಗಿನಿಂದ ವೈಯಕ್ತಿಕ ಆಸ್ತಿಯ ಮಹತ್ವವನ್ನೂ ಮತ್ತು ಉಪಯುಕ್ತತೆಯನ್ನೂ ಕಡೆಗಣಿಸುವ ಪ್ರವೃತ್ತಿಯು ಇತ್ತೀಚೆಗೆ ಹೆಚ್ಚಿದೆ, ಆದರೆ ವೈಯಕ್ತಿಕ

ಆಸ್ತಿಯಿಂದ ಹಾನಿಗಿಂತ ಲಾಭವೇ ಹೆಚ್ಚು ಎಂಬುದನ್ನು ಯಾರೂ ಅಲ್ಲಗಳೆಯು ಲಾರರು. ಆದರೂ ವೈಯಕ್ತಿಕ ಆಸ್ತಿಯಿಂದಾಗುವ ದುಷ್ಪರಿಣಾಮಗಳನ್ನು ತಡೆಯುವದು ಅವಶ್ಯಕವೆಂಬುದನ್ನು ನಾವು ಮರೆಯುಕೂಡದು. ಇದನ್ನು ತಡೆಯುವದಕ್ಕಾಗಿ ಸರಕಾರವು ಆಸ್ತಿಯ ಸಂಪಾದನೆಯ ಮೇಲೆ ನಿರ್ಬಂಧ ವನ್ನು ಹಾಕಬೇಕು. ಒಬ್ಬನು ತನಗೆ ಅವಶ್ಯಕವಿದ್ದುದಕ್ಕಿಂತ ಹೆಚ್ಚಿಗೆ ಸಂಪಾ ದಿಸಿದರೆ ಸರಕಾರವು ಅವನ ಹೆಚ್ಚಿನ ಗಳಿಕೆಯನ್ನು ಕಸಿದುಕೊಂಡುಬಿಡ ಬೇಕು. ವೈಯಕ್ತಿಕ ಆಸ್ತಿಯು ಕೇವಲ ಸ್ವಂತ ಆಡಂಬರ ಮತ್ತು ಸುಖ ಲೋಲುಪತೆಗೆ ಇರದೆ ಸಮಾಜದ ಮತ್ತು ರಾಷ್ಟ್ರದ ಹಿತಕ್ಕಾಗಿಯೂ ಇದೆ ಎಂಬ ಭಾವನೆಯು ಜನರಲ್ಲಿ ಬೇರೂರಬೇಕು. ವೈಯಕ್ತಿಕ ಆಸ್ತಿಯು ಸ್ವಪ್ರತಿಷ್ಠೆಯ ದ್ಯೋತಕವಲ್ಲ. ಆದರೆ ಅದು ಮನುಷ್ಯನು ಸಮಾಜದ ವಿಷಯದಲ್ಲಿ ಮಾಡಬೇಕಾದ ಕರ್ತವ್ಯಗಳನ್ನು ಮತ್ತು ವಹಿಸಬೇಕಾದ ಹೊಣೆಗಾರಿಕೆಗಳನ್ನೂ ಸೂಚಿಸುತ್ತದೆ. ಆಸ್ತಿಯು ಆಸ್ತಿಗಾಗಿ ಅಲ್ಲ. ಆದರೆ ಅದು ಒಂದು ಧ್ಯೇಯಸಾಧನೆಗಾಗಿ. ಆ ಧ್ಯೇಯವೆಂದರೆ ಸಾಮೂಹಿಕ ಹಿತವನ್ನು ಸಾಧಿಸುವದು ಮತ್ತು ಪ್ರತಿಯೊಬ್ಬನಿಗೆ ಸಂಪೂರ್ಣವಾದ ವ್ಯಕ್ತಿ ವಿಕಾಸಕ್ಕೆ ಅನುಕೂಲವಾದ ವಾತಾವರಣವನ್ನು ಕಲ್ಪಿಸಿಕೊಡುವದು.

## ಜಾತೀಯ ಪದ್ಧತಿ

### ವರ್ಗ (class) ತರಗತಿ (Estate) ಮತ್ತು ಜಾತಿ (Caste)

ಪ್ರತಿಯೊಂದು ಸಮಾಜದಲ್ಲಿ ಅನೇಕ ಥರಗಳಿರುತ್ತವೆ ಪ್ರತಿಯೊಂದು ಥರದಲ್ಲಿ ಒಂದು ವಿಶಿಷ್ಟವಾದ ಜೀವನಕ್ರಮ, ಶಿಕ್ಷಣ, ಉದ್ಯೋಗ ಮತ್ತು ಆರ್ಥಿಕ ಸ್ಥಿತಿಯುಳ್ಳ ಜನರು ಸೇರಿರುತ್ತಾರೆ. ಆದ್ದರಿಂದ ಪ್ರತಿಯೊಂದು ಥರ ದಲ್ಲಿಯ ಜನರು ಸಮಾಜದಲ್ಲಿ ಒಂದು ವಿಶಿಷ್ಟವಾದ ಸ್ಥಾನವನ್ನು ಪಡೆದಿರು ತ್ತಾರೆ. ಪಾಶ್ಚಾತ್ಯ ಸಮಾಜದಲ್ಲಿ ಇಂತಹ ತರಗಳಿಗೆ ಈಗ ವರ್ಗಗಳೆಂದು ಅನ್ನುತ್ತಾರೆ. ಮಧ್ಯಯುಗದಲ್ಲಿ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಈ ಥರಗಳಿಗೇನೆ ತರಗತಿ (Estate) ಎಂದು ಕರೆಯುತ್ತಿದ್ದರು. ಆದರೆ ಹಿಂದೂ

ಸಮಾಜದಲ್ಲಿ ಇವುಗಳಿಗೆ ಜಾತಿ ಎಂದು ಹೆಸರು. ಇವೆಲ್ಲವುಗಳ ನಡುವಿನ ಸಾಮ್ಯವೆಂದರೆ ಪ್ರತಿಯೊಂದು ಮಿಕ್ಕವುಗಳಿಂದ ಕೆಲವು ವೈಶಿಷ್ಟ್ಯಗಳ ಮೂಲಕ ಭಿನ್ನವಾಗಿರುತ್ತದೆ. ಆದರೂ ಅವುಗಳಲ್ಲಿ ಸಾಕಷ್ಟು ವ್ಯತ್ಯಾಸ ಗಳಿವೆ.

ಮಹತ್ವದ ತರಗತಿಗಳಾದ ಧಾರ್ಮಿಕ ಪ್ರಭುಗಳು (priest) ಲೌಕಿಕ ಪ್ರಭುಗಳು (Nobleman) ಮತ್ತು ಜನಸಾಮಾನ್ಯರು, ಕಾಯ್ದೆಯಿಂದ ಮನ್ನಿಸಲ್ಪಟ್ಟಿದ್ದರು. ಆದ್ದರಿಂದ ಪರಸ್ಪರರಲ್ಲಿ ಮಹದಂತರವಿದ್ದು ಆ ಅಂತರವನ್ನು ಸಹಜವಾಗಿ ತೆಗೆದು ಹಾಕಲು ಬರುವಂತಿರಲಿಲ್ಲ. ಒಂದು ತರಗತಿಯವನಿಗೆ ಮೇಲಿನ ತರಗತಿಯಲ್ಲಿ ಸೇರಲು ಆಸ್ಪದವಿರಲಿಲ್ಲ.

ಶ್ರೀಮಂತ, ಬಡವ, ಕೂಲಿಕಾರ, ವಕೀಲಿವರ್ಗ, ಶಿಕ್ಷಕರ ವರ್ಗ ಮುಂತಾದ ಆಧುನಿಕ ವರ್ಗಗಳನ್ನು ಕಾಯಿದೆಯು ಮನ್ನಿಸುವದಿಲ್ಲ. ಕಾಯ ದೆಯ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ಪರಸ್ಪರ ವರ್ಗಗಳಲ್ಲಿ ಅಷ್ಟೊಂದು ಮಹದಂತರವಿಲ್ಲ. ಕೆಳಗಿನ ವರ್ಗದವರು ಸತತ ಪ್ರಯತ್ನದಿಂದ ಮೇಲಿನ ವರ್ಗದಲ್ಲಿ ಸೇರಬಹುದು

ಜಾತಿಗಳಿಗೆ ಧಾರ್ಮಿಕ ಬೆಂಬಲವಿದೆ. ವಾಡಿಕೆಯಾಗಿ ಒಬ್ಬನು ತನ್ನ ಜಾತಿಯನ್ನು ಸಹಜವಾಗಿ ಬದಲಿಸಲಾರನು.

**ಜಾತಿ:—**

ಎಲ್ಲ ಸಮಾಜಗಳಲ್ಲಿ ವರ್ಗಗಳಿವೆ. ಆದರೆ ಜಾತೀಯ ಪದ್ಧತಿಯು ನಮ್ಮ ದೇಶದ ವೈಶಿಷ್ಟ್ಯ. ಮೊದಲು ಅವರವರ ಸ್ವಭಾವ (ಗುಣ) ಹಾಗೂ ವ್ಯವಸಾಯ (ಕರ್ಮ)ಗಳಿಗನುಸಾರವಾಗಿ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರ ಎಂಬ ಜಾತಿಗಳು (ಇವುಗಳಿಗೆ ವರ್ಗಗಳೆನ್ನುವದು ಹೆಚ್ಚು ಉಚಿತ) ಅಸ್ತಿತ್ವದಲ್ಲಿ ಬಂದವು. ಬ್ರಾಹ್ಮಣರು ಬೌದ್ಧಿಕ ಕೆಲಸವನ್ನು, ಕ್ಷತ್ರಿಯರು ದೇಶವನ್ನು ಸಂರಕ್ಷಿಸುವ ಮತ್ತು ರಾಜವನ್ನು ಪರಿಪಾಲಿಸುವ ಕಾರ್ಯ ವನ್ನು, ವೈಶ್ಯರು ವ್ಯಾಪಾರ ಉದ್ಯೋಗಗಳನ್ನು, ಮತ್ತು ಶೂದ್ರರು ಸೇವಾವೃತ್ತಿಯನ್ನು ಕೈಕೊಳ್ಳುತ್ತಿದ್ದರು. ಆದರೆ ಈ ನಾಲ್ಕು ಜಾತಿಗಳು

ಒಡೆದು ಅನೇಕ ಜಾತಿಗಳಾಗಿ ಈಗ ಅವುಗಳ ಸಂಖ್ಯೆಯು ೩ ಸಾವಿರಕ್ಕೆ ಮಿಕ್ಕಿದೆ. ಮೊದಲು ಅಂತರ್ಜಾತೀಯ ವಿವಾಹಗಳಿಗೂ ಅಂತರ್ಜಾತೀಯ ಭೋಜನ ಮುಂತಾದ ಸಮಾರಂಭಗಳಿಗೂ ಯಾವ ಆತಂಕವಿರಲಿಲ್ಲ. ಮನುಷ್ಯರಿಗೆ ತಮ್ಮ ಜಾತಿಯನ್ನು (ವರ್ಗವನ್ನು) ಬದಲಿಸಲು ಬರುತ್ತಿತ್ತು. ಅಂತೆಯೇ ಕ್ಷತ್ರಿಯನಾದ ವಿಶ್ವಾಮಿತ್ರನು ತನ್ನ ಪ್ರಯತ್ನದ ಬಲದಿಂದ ಬ್ರಾಹ್ಮಣನಾದನು. ಆದರೆ ಇಂದು ಸಾಧ್ಯವಿಲ್ಲ. ಜಾತಿಯು ಆನುವಂಶಿಕವಾಗಿ ನಡೆದು ಬರುವದರಿಂದ ಒಬ್ಬನಿಗೆ ತನ್ನ ಜಾತಿಯನ್ನು ಬದಲಿಸಲು ಬರುವದಿಲ್ಲ. ಜನನವೇ ಜಾತಿಯನ್ನು ನಿರ್ಧರಿಸುತ್ತದೆ



ಲಾಭಗಳು:—

(೧) ಇದು ಶ್ರಮವಿಭಾಗದ ಒಂದು ಉತ್ತಮವಾದ ಮಾದರಿಯು. ಸಹಿಷ್ಣುತೆ ಮತ್ತು ವಿಶ್ವಾಸಗಳೇ ಇದರ ತಳಹದಿಯು. ಇದರಲ್ಲಿ ಸ್ಪರ್ಧೆಗಿಂತ ಸಹಕಾರ್ಯಕ್ಕೆ ಪ್ರಾಧಾನ್ಯ ಹೆಚ್ಚು. ಒಂದು ಜಾತಿಯವರು ಒಂದೇ ವ್ಯವಸಾಯವನ್ನು ಮಾಡುವದರಿಂದ ಅದರಲ್ಲಿ ಪ್ರಾವೀಣ್ಯತೆಯನ್ನು ಹೊಂದುತ್ತಾರೆ.

(೨) ವ್ಯವಸಾಯವನ್ನು ಒಂದು ಪೀಳಿಗೆಯಿಂದ ಮುಂದಿನ ಪೀಳಿಗೆಗೆ ಸಾಗಿಸಲು ಇದು ಉತ್ತಮವಾದ ಮಾರ್ಗವು.

(೩) ಆಪತ್ಸಮಯದಲ್ಲಿ ಆಯಾ ಜಾತಿಯವರು ತಮ್ಮ ತಮ್ಮ ಜಾತಿಯವರಿಗೆ ನೆರವನ್ನು ನೀಡುತ್ತಾರೆ. ಆ ಆ ಜಾತಿಯ ಜನರಲ್ಲಿ ಅಭಿಮಾನ, ಸೇವಾಬುದ್ಧಿ, ಸ್ವಾರ್ಥತ್ಯಾಗ ಮುಂತಾದ ನಾಗರಿಕತೆಯ ಸದ್ಗುಣಗಳು ಬೆಳೆಯುತ್ತವೆ.

(೪) ಧರ್ಮವು ಉಳಿಯಲು ಒಂದು ಉತ್ತಮವಾದ ಮಾರ್ಗವು. ಹಿಂದುಸ್ಥಾನದ ಮೇಲೆ ಅನೇಕ ಪರಕೀಯರು ಆಕ್ರಮಣವನ್ನು ಮಾಡಿದರೂ ಹಿಂದೂಧರ್ಮವು ಅಚ್ಚಳಿಯದೆ ಉಳಿಯಲು ಇದೇ ಮುಖ್ಯವಾದ ಕಾರಣವು.

(೫) ಕುಲವನ್ನು ಶುದ್ಧವಾಗಿಡಲು ಮತ್ತು ವರ್ಣಸಂಕರವನ್ನು ತಡೆಗಟ್ಟಲು ಇದರಿಂದ ನೆರವಾಗುತ್ತದೆ.

**ಹಾನಿಗಳು:—**

(೧) ಆ ಆ ಜಾತಿಯ ಜನರ ದೃಷ್ಟಿಕೋನವನ್ನು ಸಂಕುಚಿತವನ್ನಾಗಿ ಮಾಡುತ್ತದೆ. ಯಾವಾಗಲೂ ಮನುಷ್ಯನ ದೃಷ್ಟಿಯು ತನ್ನ ಜಾತಿಯ ಹಿತದ ಮೇಲೆಯೇ ನಟ್ಟಿರುತ್ತದೆ.

(೨) ಅನೇಕ ಜಾತೀಯ ನಿರ್ಬಂಧಗಳು ವ್ಯಕ್ತಿಯ ನಿರಾತಂಕವಾದ ವಿಕಾಸಕ್ಕೆ ಅಡ್ಡಬರುತ್ತವೆ,

(೩) ಇದು ಬೇರೆ ಜಾತಿಯವರ ವಿಷಯದಲ್ಲಿ ದ್ವೇಷಾಸೂಯೆಗಳನ್ನೂ ಮತ್ತು ತಿರಸ್ಕಾರವನ್ನೂ ಹುಟ್ಟಿಸುತ್ತದೆ. ಕೀಳು ಜಾತಿಯವರೆಂದು ತಿಳಿಯಲಾದ ಜನರ ಹಿತಾಹಿತಗಳನ್ನು ಅಲಕ್ಷಿಸಲ್ಪಡುತ್ತವೆ.

(೪) ಇದು ಜನ್ಮಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುವದರಿಂದ ಕೀಳು ಜಾತಿಯವರಲ್ಲಿ ಯೋಗ್ಯತೆ ಮತ್ತು ಸದ್ಗುಣಗಳಿದ್ದರೂ ಅವರಿಗೆ ಮುಂದುವರಿಯಲು ಆಸ್ಪದವಿರುವದಿಲ್ಲ. ಹೀಗಾಗಿ ಕೆಳವರ್ಗದವರಲ್ಲಿರುವ ಬುದ್ಧಿಮತ್ತೆಯ ಉಪಯೋಗವು ಸಮಾಜಕ್ಕೆ ದೊರೆಯದೆ ಹೋಗುತ್ತದೆ.

(೫) ಇದು ರಾಷ್ಟ್ರದ ಐಕ್ಯಕ್ಕೆ ವಿಘಾತಕವಾಗಿದೆ.

(೬) ಇದರಿಂದ ಆರ್ಥಿಕ ಪ್ರಗತಿಗೆ ತಡೆಯಾಗುತ್ತದೆ. ಪರಿಸ್ಥಿತಿ ಮತ್ತು ಆರ್ಥಿಕ ಅವಶ್ಯಕತೆಗಳಿಗನುಸರಿಸಿ ವ್ಯವಸಾಯವನ್ನು ಬದಲಿಸಲು ಬರುವದಿಲ್ಲ. ಉದಾಹರಣೆಗಾಗಿ ಮೀನಗಳ ಸಲುವಾಗಿ ಬೇಡಿಕೆಯು ಹೆಚ್ಚಾದರೆ ಮೀನಗಾರಿಕೆಯ ಉದ್ಯೋಗವನ್ನು ಮಾಡುವವರ ಸಂಖ್ಯೆಯು ಸ್ವಾಭಾವಿಕವಾಗಿ ಹೆಚ್ಚಾಗಬೇಕು. ಆದರೆ ಈ ಜಾತೀಯ ಪದ್ಧತಿಯ ಮೂಲಕ ಇಂಥ ಬದಲಾವಣೆಯಿಂದ ಆರ್ಥಿಕ ಲಾಭವಾಗುವಂತಿದ್ದರೂ ಉಚ್ಚ ವರ್ಗದವರು ಈ ವ್ಯವಸಾಯವನ್ನು ಕೈಕೊಳ್ಳುವದಿಲ್ಲ.

**ಜಾತೀಯ ಪದ್ಧತಿಯ ಭವಿತವ್ಯ:—**

ಈ ಪದ್ಧತಿಯಿಂದ ಲಾಭಕ್ಕಿಂತಲೂ ಹಾನಿಯೇ ಹೆಚ್ಚು ಇರುವದರಿಂದ ಇದು ನಾಶಹೊಂದುವದೇ ಒಳಿತು, ಆದರೆ ಇದು ಹಿಂದೂ ಸಮಾಜದಲ್ಲಿ

ಸಾಧ್ಯವಿಲ್ಲದ್ದರಿಂದ ಜಾತೀಯ ಪದ್ಧತಿಯನ್ನು ಸುಧಾರಿಸುವದೇ ಶ್ರೇಯಸ್ಕರವು. ಜಾತಿಗೆ ಪ್ರಾಧಾನ್ಯವನ್ನು ಕೊಡಬಾರದು. ಒಬ್ಬನಿಗೆ ಹೆಜ್ಜೆ ಹೆಜ್ಜೆಗೂ ಅವನ ಜಾತಿಯನ್ನು ಕೇಳುವ ಅನಿಷ್ಟವಾದ ಪದ್ಧತಿಯು ಇಲ್ಲದಾಗಬೇಕು. ಅಧಿಕಾರದ ಸ್ಥಳಗಳನ್ನು ಕೊಡುವಾಗ ವ್ಯಕ್ತಿಯ ಜಾತಿಯನ್ನು ಲಕ್ಷಿಸದೆ ಅವನ ಅರ್ಹತೆಯ ಕಡೆಗೆ ಅಷ್ಟೇ ಗಮನವನ್ನೀಯಬೇಕು. ಬೇರೆ ಬೇರೆ ಜಾತಿಯ ಜನರು ಯಾವ ಭೇದವಿಲ್ಲದೆ ಒಂದೆಡೆಗೆ ಸೇರಿ ದಚಾರ ವಿನಿಮಯ ಮಾಡುವ ಸಂದರ್ಭಗಳು ಹೆಚ್ಚಾಗಬೇಕು. ಹೃದಯಗಳು ತಿಳಿಯಾಗಿ ಪರಸ್ಪರರಲ್ಲಿ ಪ್ರೀತಿ ವಿಶ್ವಾಸಗಳು ಬೆಳೆಯಬೇಕು. ಕೊನೆಯದಾಗಿ ಜಾತಿಗಳ ಬದಲಾಗಿ ಆರ್ಥಿಕ ತಳಹದಿಯುಳ್ಳ ವರ್ಗಗಳು ಅಸ್ತಿತ್ವದಲ್ಲಿ ಬರಬೇಕು. ವರ್ಗರಹಿತವಾದ ಸಮಾಜವನ್ನು ಕಟ್ಟುವದು ಧ್ಯೇಯವಾಗಿದ್ದರೂ ಆ ಧ್ಯೇಯವನ್ನು ಸಾಧಿಸುವದು ಕಲ್ಪನಾಸಾಮ್ರಾಜ್ಯದಲ್ಲಿ ಮಾತ್ರ.

---

# ಅಧ್ಯಾಯ ೪

## ಸರಕಾರವೂ ಅದರ ಕರ್ತವ್ಯಗಳೂ

ಸರಕಾರವು ದೇಶದ ಒಂದು ಅವಶ್ಯಕವಾದ ಮಹತ್ವದ ಅಂಗವು. ಅದು ಮಾಡತಕ್ಕ ಕರ್ತವ್ಯಗಳು ಅನೇಕವಿವೆ. ಅವನ್ನು ಸ್ಥೂಲವಾಗಿ ಅವಶ್ಯಕ ಮತ್ತು ಐಚ್ಛಿಕ ಎಂದು ಎರಡು ರೀತಿಯಾಗಿ ವಿಭಾಗಿಸಬಹುದು.

**ಅವಶ್ಯಕ ಕರ್ತವ್ಯಗಳು:—** ಇವು, ಸರಕಾರವು ದೇಶದ ಶಾಂತಿ, ಸುವ್ಯವಸ್ಥೆಗಾಗಿ ಮತ್ತು ಪರಚಕ್ರವನ್ನು ತಡೆಯುವದಕ್ಕಾಗಿ ಮಾಡಲೇ ಬೇಕಾದ ಕರ್ತವ್ಯಗಳು.

i) ಪರರಾಷ್ಟ್ರಗಳ ಆಕ್ರಮಣವನ್ನು ತಡೆಯುವದು ಈ ಕರ್ತವ್ಯವನ್ನು ಸರಕಾರವು ಸುವ್ಯವಸ್ಥಿತವಾದ ಸೈನ್ಯ, ಹಡಗುಪಡೆ ಮತ್ತು ವೈಮಾನಿಕದಳ ಇವುಗಳ ಸಹಾಯದಿಂದ ನೆರವೇರಿಸುತ್ತದೆ.

ii) ಆಂತರಿಕ ಶಾಂತಿ ಸುವ್ಯವಸ್ಥೆಯನ್ನು ಕಾಯುವದು, ಅಪರಾಧ ಗಳನ್ನು ತಡೆಯುವದು, ಆಸ್ತಿಯನ್ನು ರಕ್ಷಿಸುವದು, ವ್ಯಕ್ತಿಸ್ವಾತಂತ್ರ್ಯವನ್ನು ಕಾಯುವದು, ದಂಗೆ ಮತ್ತು ಜಾತೀಯ ಕಲಹಗಳನ್ನು ಹತ್ತಿಕ್ಕುವದು ಇವು ಇದರಲ್ಲಿ ಸಮಾವೇಶವಾಗುತ್ತವೆ. ಸರಕಾರವು ಈ ಕಾರ್ಯವನ್ನು ಬಲಿಷ್ಠ ವಾದ ಪೋಲೀಸ ಪಡೆಯಿಂದ ನೆರವೇರಿಸುತ್ತದೆ. ಈ ಕಾರ್ಯಕ್ಕಾಗಿ ಇತ್ತೀಚೆಗೆ ಪೋಲೀಸ ಪಡೆಯ ಸಹಾಯಕ್ಕೆಂದು ಗೃಹರಕ್ಷಕ ದಳವೆಂಬ ಹೊಸದೊಂದು ಸಂಸ್ಥೆಯನ್ನು ಸರಕಾರವು ಏರ್ಪಡಿಸಿರುತ್ತದೆ.

iii) ನ್ಯಾಯದಾನ:— ವ್ಯಕ್ತಿ ವ್ಯಕ್ತಿಗಳ ನಡುವೆ ಇಲ್ಲವೆ ವ್ಯಕ್ತಿ ಮತ್ತು ಸರಕಾರಗಳ ನಡುವೆ ಬರುವ ವ್ಯಾಜ್ಯಗಳನ್ನು ತೀರಿಸುವದು. ಈ ಕೆಲಸ ವನ್ನು ಸರಕಾರವು ವಿವಿಧ ನ್ಯಾಯಾಸನಗಳ ಮೂಲಕ ನಡೆಸುತ್ತದೆ.

iv) ಗಂಡ ಹೆಂಡಿರ ನಡುವಿನ ಮತ್ತು ತಾಯಿತಂದೆ ಮಕ್ಕಳ ನಡು ವಿನ ಸಂಬಂಧವನ್ನು ನಿರ್ದಿಷ್ಟಗೊಳಿಸುವದು.

ಐಚ್ಛಿಕ ಕರ್ತವ್ಯಗಳು:— ವ್ಯಕ್ತಿಯ ಹಿತವನ್ನು ಕಾಯಲು ಸಂಸ್ಕೃತಿಯನ್ನು ಬೆಳಿಸಲು ಮತ್ತು ಆತನ ಸೌಖ್ಯವನ್ನು ಹೆಚ್ಚಿಸಲು ಸರಕಾರವು ಈ ಕರ್ತವ್ಯಗಳನ್ನು ಪಾಲಿಸುತ್ತದೆ.

i) ವ್ಯಾಪಾರೋದ್ಯೋಗಗಳ ನಿಯಂತ್ರಣ:— ಆಯಾತ ನಿರ್ಯಾತ ಸರಕುಗಳ ಮೇಲೆ ಕರವನ್ನು ಹೇರುತ್ತದೆ. ಕಾರಖಾನೆಯನ್ನು ನಿಯಂತ್ರಿಸುತ್ತದೆ. ನಾಣ್ಯಗಳನ್ನು ಮುದ್ರಿಸುತ್ತದೆ. ವ್ಯಾಪಾರದ ವಿಷಯದಲ್ಲಿ ಅಧಿಕಾರಪತ್ರ (licence) ಗಳನ್ನು ಕೊಡುತ್ತದೆ. ಪ್ರಮಾಣಾನುಸಾರವಾದ ತೂಕ ಮತ್ತು ಅಳತೆಗಳನ್ನು ಗೊತ್ತುಪಡಿಸುತ್ತದೆ.

ii) ರೇಲ್ವೆ, ಅಂಚೆಖಾತೆ, ಟೆಲಿಫೋನ ಮುಂತಾದ ಸೌಕರ್ಯಗಳನ್ನು ಕಲ್ಪಿಸಿಕೊಡುತ್ತದೆ.

iii) ಸ್ಥಾನಿಕ ಸಂಸ್ಥೆಗಳ ಮುಖಾಂತರ ಸಾರ್ವಜನಿಕ ಆರೋಗ್ಯ, ಊರಿನ ಸ್ವಚ್ಛತೆ, ಔಷಧೋಪಚಾರ ಮುಂತಾದವುಗಳ ವ್ಯವಸ್ಥೆಯನ್ನು ಮಾಡುತ್ತದೆ.

iv) ಒಕ್ಕಲುತನದ ಸುಧಾರಣೆಗಾಗಿ ಮಾದರಿಯ ಹೊಲಗಳನ್ನು ಸಾಗುಮಾಡುತ್ತದೆ. ಮತ್ತು ಸರಕಾರೀ ಖಾತೆಯ ಮುಖಾಂತರ ರೈತರಿಗೆ ಸಹಾಯ ಮಾಡುತ್ತದೆ.

v) ಬಡವರ, ದುರ್ಬಲರ ಮತ್ತು ವೃದ್ಧರ ಮೇಲ್ವಿಚಾರಣೆಯನ್ನು ಮಾಡುತ್ತದೆ.

vi) ದೇಶದ ಆಡಳಿತೆಯಲ್ಲಿ ವ್ಯಕ್ತಿಯು ಜಾಣತನದಿಂದ ಭಾಗವಹಿಸುವದಕ್ಕಾಗಿ ಪುಕ್ಕಟೆ ಒತ್ತಾಯದ ಶಿಕ್ಷಣವನ್ನು ಕೊಡುತ್ತದೆ.

vii) ಮನರಂಜನೆಯ ಮತ್ತು ವಿಶ್ರಾಂತಿಗಾಗಿ ಉಪವನ, ಕ್ರೀಡಾಂಗಣ, ವಸ್ತುಸಂಗ್ರಹಾಲಯ ಮುಂತಾದವುಗಳನ್ನು ಇಡುತ್ತದೆ.

ಇತ್ತೀಚೆಗೆ ಈ ಐಚ್ಛಿಕ ಕರ್ತವ್ಯಗಳೇ ಅವಶ್ಯಕ ಕರ್ತವ್ಯಗಳಾಗಿ ಪರಿಣಮಿಸಹತ್ತಿವೆ.

ಇನ್ನೊಂದು ಬಗೆಯ ವರ್ಗೀಕರಣ:— ಸರಕಾರದ ಕರ್ತವ್ಯಗಳನ್ನು ಕಾರ್ಯನಿರ್ವಾಹಕ (Executive), ಕಾಯಿದೆವಿಧಾಯಕ

(Lagistative), ನ್ಯಾಯಸಂಬಂಧಿಕ (Judicial) ಎಂದು ವಿಭಾಗಿಸ ಬಹುದು.

ಕಾರ್ಯನಿರ್ವಾಹಕ ಶಾಖೆಯ ಮುಖ್ಯ ಉದ್ದೇಶವೆಂದರೆ ದೇಶದಲ್ಲಿ ಶಾಂತಿ ಸುವ್ಯವಸ್ಥೆ ನೆಲೆಗೊಂಡು ಸಾಮಾಜಿಕ ಹಿತವು ಸಾಧಿಸುವಂತೆ ವರ್ತಿಸುವದು. ರಾಜಕೀಯ ಧೋರಣೆಯನ್ನು ಗೊತ್ತುಪಡಿಸಿ ಸಾಮಾನ್ಯ ಆಡಳಿತೆಯನ್ನು ಸಾಗಿಸುವದು.

ಕಾಯದೆ ವಿಧಾಯಕ ಶಾಖೆಯ ಮುಖ್ಯ ಕಾರ್ಯವೆಂದರೆ ವ್ಯಕ್ತಿ ವ್ಯಕ್ತಿಗಳಲ್ಲಿ, ವ್ಯಕ್ತಿ ಮತ್ತು ಸರಕಾರಗಳ ನಡುವೆ ವ್ಯವಹಾರವು ಸುಗಮವಾಗಿ ಸಾಗುವದಕ್ಕಾಗಿ ಕಾಯದೆಯನ್ನು ಮಾಡುವದು.

ನ್ಯಾಯಸಂಬಂಧಿಕ ಶಾಖೆಯ ಮುಖ್ಯ ಕೆಲಸವೆಂದರೆ ದೇಶದ ಕಾನೂನುಗಳ ಅರ್ಥವಿವೇಚನೆಯನ್ನು ಮಾಡುವದು.

**ಸರಕಾರದ ಅಂಗಗಳು** (Organs of Government)

ಮೇಲೆ ವಿವರಿಸಿದ ಸರಕಾರದ ಮೂರು ಕರ್ತವ್ಯಗಳಿಗನುಸರಿಸಿ ಸರಕಾರದಲ್ಲಿ ಮೂರು ಅಂಗಗಳನ್ನು ಮಾಡಬಹುದು

i) ಕಾರ್ಯಕಾರೀ ಶಾಖೆ ii) ಕಾಯದೆ ವಿಧಾಯಕ ಶಾಖೆ iii) ನ್ಯಾಯಶಾಖೆ.

i) **ಕಾರ್ಯಕಾರೀ ಶಾಖೆ:—**ಶಾಸನಮಂಡಲಗಳಲ್ಲಿ ಪಾಸುಮಾಡಿದ ಕಾನೂನುಗಳನ್ನು ಅಮಲಿನಲ್ಲಿ ತಂದು ದೇಶದಲ್ಲಿ ಶಾಂತಿ ಸುವ್ಯವಸ್ಥೆಯನ್ನು ಪ್ರಸ್ಥಾಪಿಸುವದು ಇದನ್ನು ಕೂಡಿದೆ. ವ್ಯಾಪಕಾರ್ಥದಲ್ಲಿ ಸಾರ್ವಭೌಮರಿಂದ ಹಳ್ಳಿಯ ವಾಲೀಕಾರರ ವರೆಗೆ ಎಲ್ಲ ಸರಕಾರೀ ಅಧಿಕಾರಿಗಳು ಇದರಲ್ಲಿ ಸೇರುತ್ತಾರೆ. ಆದರೆ ಸಂಕುಚಿತವಾದ ಮತ್ತು ಬಳಿಕೆಯಲ್ಲಿರುವ ಅರ್ಥವೆಂದರೆ ಸಮಗ್ರ ದೇಶದ ಆಡಳಿತೆಯ ಬಗ್ಗೆ ಸಾಮಾನ್ಯ ಧೋರಣೆ ನಿರ್ಧರಿಸುವ ಕಾರ್ಯಕಾರೀ ಮಂಡಲ. ಉದಾ:—ಚಕ್ರವರ್ತಿ, ಗವ್ಹರ್ನರ ಜನರಲ್, ಪ್ರೆಸಿಡೆಂಟ್, ಮಂತ್ರಿಮಂಡಲ ಇತ್ಯಾದಿ. ಈ ಅರ್ಥದಲ್ಲಿ ಇದಕ್ಕೆ ರಾಜಕೀಯ ಕಾರ್ಯಕಾರಿ ಮಂಡಲ (Political Executive) ಎನ್ನುತ್ತಾರೆ.

ರಾಜ್ಯದಾಡಳಿತೆಯ ಕೆಲಸವು ಬಲು ತೊಡಕಿನದಾಗಿದೆ.ಆದ್ದರಿಂದ ಅದಕ್ಕಾಗಿ ನುರಿತ, ಅನುಭವವುಳ್ಳ ಮತ್ತು ಆಳವಾದ ಜ್ಞಾನವುಳ್ಳ ಜನರು ಬೇಕು.

ಈ ಜನರು ಕೇವಲ ಮಾತನಾಡುವವರಿರದೆ ಪ್ರತ್ಯಕ್ಷ ಕೆಲಸಮಾಡುವವರು ಇರಬೇಕು. ಇದಲ್ಲದೆ ಅವರು ಕಾರ್ಯವನ್ನು ತಡವಿಲ್ಲದೆ ಮಾಡುವವರೂ, ಒಂದೇ ಉದ್ದೇಶವುಳ್ಳವರೂ, ಕಾರ್ಯೋತ್ಸಾಹಿಗಳೂ, ಮತ್ತು ಗುಟ್ಟನ್ನು ಕಾಯುವವರೂ ಇರಬೇಕು.

**ಕಾರ್ಯಗಳು:—** (i) ಶಾಸನ ಮಂಡಲಗಳು ಮಾಡಿದ ಕಾನೂನುಗಳನ್ನು ಜಾರಿಯಲ್ಲಿ ತರುವುದು ಇದರ ಮುಖ್ಯವಾದ ಕಾರ್ಯ. ಕೆಲವೊಂದು ದೇಶದಲ್ಲಿ (ಇಂಗ್ಲಂಡ ಮುಂತಾದವುಗಳಲ್ಲಿ) ಶಾಸನ ಮಂಡಲಗಳನ್ನು ಕರೆಯುವ ಮುಂದುವರಿಸುವ ಮತ್ತು ವಿಸರ್ಜಿಸುವ ಅಧಿಕಾರವು ಇದರ ಕೈಯಲ್ಲಿಯೇ ಇರುತ್ತದೆ. ಕಾಯದೆಗಳನ್ನು ಪ್ರಸಿದ್ಧಗೊಳಿಸಿ ಪ್ರಸರಣ ಮಾಡುವದೂ, ಕೆಲವೊಂದು ಸಂದರ್ಭಗಳಲ್ಲಿ ಸುಗ್ರೀವಾಜ್ಞೆಗಳನ್ನು(Ordinance) ಹೊರಡಿಸುವದೂ ಇದನ್ನೇ ಕೂಡಿದೆ.

ii) ದೇಶದ ಎಲ್ಲ ಅಧಿಕಾರಿಗಳನ್ನು ನೇಮಿಸುವ, ಅವರ ಮೇಲ್ವಿಚಾರಣೆ ಮಾಡುವ ಮತ್ತು ಕಿತ್ತಿಹಾಕುವ ಅಧಿಕಾರವು ಇದಕ್ಕಿದೆ. ದೇಶದಲ್ಲಿ ಶಾಂತಿ ಸುವ್ಯವಸ್ಥೆಯನ್ನು ನೆಲೆಗೊಳಿಸುತ್ತದೆ.

iii) ಪರದೇಶದ ರಾಯಭಾರಿಗಳೊಡನೆ ವಿಚಾರವಿನಿಮಯವನ್ನು ನಡೆಯಿಸಿ ಯುದ್ಧವನ್ನು ಸಾರುವ ಅಧಿಕಾರವು ಇದಕ್ಕಿದೆ.

iv) ನ್ಯಾಯಾಧೀಶರನ್ನು ನೇಮಿಸುತ್ತದೆ. ಮತ್ತು ಅವರು ಸರಿಯಾಗಿ ವರ್ತಿಸದಿದ್ದಲ್ಲಿ ಅವರ ವಿರುದ್ಧ ಶಿಸ್ತಿನ ಕ್ರಮವನ್ನು ಕೈಕೊಳ್ಳುತ್ತದೆ. ಅಪರಾಧಿಗಳಿಗೆ ದಯಾಗುಣವನ್ನು ತೋರಿಸಿ ಅವರನ್ನು ಕ್ಷಮಿಸುವ ಅಧಿಕಾರವು ಇದಕ್ಕುಂಟು.

ಕಾರ್ಯಕಾರೀ ಅಧಿಕಾರವು ಅಮೇರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿಯಂತೆ ಒಬ್ಬನ (ಪ್ರೆಸಿಡೆಂಟ) ಕೈಯಲ್ಲಿ ಇರಬಹುದು. ಇಲ್ಲವೆ ಇಂಗ್ಲಂಡದಲ್ಲಿಯಂತೆ ಅನೇಕ ಜನರ (ಮಂತ್ರಿಮಂಡಲ) ಕೈಯಲ್ಲಿ ಇರಬಹುದು.

**ಕಾಯದೆ ವಿಧಾಯಕ ಶಾಖೆ**

ದೇಶದ ಸುವ್ಯವಸ್ಥಿತವಾದ ಆಡಳಿತೆಗಾಗಿ ಕಾನೂನುಗಳನ್ನು ಮಾಡುವ ಅಧಿಕಾರವುಳ್ಳ ಶಾಖೆಗೆ ಕಾಯದೆ ವಿಧಾಯಕ ಶಾಖೆ ಎಂಬ ಹೆಸರು.

ಕರ್ತವ್ಯಗಳು:— i) ದೇಶದ ಹಿತಕ್ಕಾಗಿ ಕಾಯದೆಯನ್ನು ಮಾಡು ತ್ತದೆ. ಕಾಲಮಾನ ಪರಿಸ್ಥಿತಿಗಳಿಗೆ ಅನುಚಿತವಾದ ಕಾಯದೆಗಳನ್ನು ಕಿತ್ತಿ ಹಾಕುತ್ತದೆ. ಇಲ್ಲವೆ ಅವನ್ನು ಸರಿಹೋಗುವಂತೆ ಮಾರ್ಪಡಿಸುತ್ತದೆ.

ii) ಕೆಳಗೆ ಕಾಣಿಸಿದ ರೀತಿಗಳಲ್ಲಿ ಕಾರ್ಯಕಾರೀ ಶಾಖೆಯನ್ನು ನಿಯಂತ್ರಿಸುತ್ತದೆ.

ಅ) ಪ್ರಶ್ನೆ ಮತ್ತು ಉಪಪ್ರಶ್ನೆಗಳನ್ನು ಕೇಳುವದು.

ಬ) ಸಾರ್ವಜನಿಕ ಮಹತ್ವದ ವಿಷಯಗಳ ಬಗ್ಗೆ ಠರಾವನ್ನು ಮಂಡಿ ಸುವದು.

ಕ) ಶಾಸನ ಮಂಡಲದ ಅಧಿವೇಶನವು ನಡೆದಾಗ ಅದನ್ನು ಮುಂದೂಡಿ ಆ ಸಮಯದಲ್ಲಿ ಸಾರ್ವಜನಿಕ ಹಿತಕ್ಕೆ ಸಂಬಂಧಿಸಿದ ವಿಷಯ ಗಳನ್ನು ಚರ್ಚಿಸುವದು.

ಡ) ಎಲ್ಲಕ್ಕೂ ಮಹತ್ವದ ಅಸ್ತ್ರವೆಂದರೆ ಕಾರ್ಯಕಾರೀ ಶಾಖೆಯ ಬಗ್ಗೆ ಅವಿಶ್ವಾಸ ಠರಾವನ್ನು ಮಂಡಿಸುವದು.

iii) ಹಣಕಾಸಿನ ಮೇಲೆ ಅದರ ಸಂಪೂರ್ಣ ಅಧಿಕಾರವಿದೆ. ಸರ ಕಾರದ ಆಡಳಿತೆಗಾಗಿ ಹಣವನ್ನು ಕೂಡಿಸುವದು ಮತ್ತು ಅದನ್ನು ತನಗೆ ಯೋಗ್ಯವೆನಿಸಿದ ರೀತಿಯಲ್ಲಿ ವಿನಿಯೋಗಿಸುವದು ಇದನ್ನೇ ಕೂಡಿದೆ.

iv) ಚುನಾವಣೆಯ ಕಾಲಕ್ಕೆ ಆರಿಸಿಬಂದ ಉಮೇದವಾರರ ಬಗ್ಗೆ ತಕರಾರುಗಳಿದ್ದರೆ, ಅವುಗಳ ಬಗ್ಗೆ ತೀರ್ಮಾನವನ್ನು ಕೊಡುವದು ಮತ್ತು ತನ್ನ ಸದಸ್ಯರ ವಿರುದ್ಧ ತಕರಾರು ಬಂದಲ್ಲಿ ನ್ಯಾಯವಿಚಾರಣೆಯನ್ನು ಮಾಡು ವದು. ಕೆಲವು ದೇಶಗಳಲ್ಲಿ ಇದುವೇ ವರಿಷ್ಠ ನ್ಯಾಯಾಲಯವಾಗುತ್ತದೆ. ಉದಾ:— ಇಂಗ್ಲಂಡದ ಮನ್ನೆಯರ ಮನೆ (House of Lords)

ಇದರ ಅವಧಿಯು ತೀರ ಸ್ವಲ್ಪ ಇಲ್ಲವೆ ತೀರ ದೀರ್ಘವಿರಬಾರದು. ಅವಧಿಯು ಸ್ವಲ್ಪವಿದ್ದಲ್ಲಿ ಅಧಿಕಾರಾರೂಢವಾದ ಪಕ್ಷಕ್ಕೆ ತನ್ನ ಧೋರಣೆ ಯನ್ನು ಕಾರ್ಯರೂಪಕ್ಕೆ ಇಳಿಸಲು ಸಾಧ್ಯವಾಗುವದಿಲ್ಲ. ಅದರಂತೆ ಅದರ ಅವಧಿ ಬಹಳವಿದ್ದರೆ ತುಸು ಕಾಲದ ನಂತರ ಅದು ಜನರ ಆದರ, ಮನ್ನಣೆ, ಸಹಾನುಭೂತಿ ಮತ್ತು ವಿಶ್ವಾಸಗಳನ್ನು ಕಳೆದುಕೊಳ್ಳಬಹುದು.

ನಂತರ ಅದು ನಿಜವಾಗಿ ಜನರ ಪ್ರತಿನಿಧಿಯಾಗಲಾರದು. ಲಾಸ್ಕಿಯವರ ಅಭಿಪ್ರಾಯದಂತೆ ಆಧುನಿಕ ಶಾಸನ ಮಂಡಲಗಳ ಅವಧಿಯು ಐದು ವರ್ಷಗಳ ವರೆಗೆ ಇರುವದು ಯೋಗ್ಯವಾದುದು.

ಒಂದು ಶಾಸನಮಂಡಲವಿದ್ದರೆ ಅದಕ್ಕೆ ಒಮ್ಮನೆಯ ಪದ್ಧತಿ ಎಂತಲೂ (Unicameral system) ಎರಡು ಮನೆಗಳಿದ್ದರೆ ಇಮ್ಮನೆಯ ಪದ್ಧತಿ (Bicameral system) ಎಂತಲೂ ಕರೆಯುತ್ತಾರೆ.

**ಇಮ್ಮನೆಯ ಪದ್ಧತಿ: — (Bicameral System)**

**ಲಾಭಗಳು:—** i) ಕೆಳಮನೆಯ ಸದಸ್ಯರು ಸಾಮಾನ್ಯವಾಗಿ ಚಿಕ್ಕ ವಯಸ್ಸಿನವರಿರುತ್ತಾರೆ. ತರುಣರ ರಕ್ತವು ಬಿಸಿ ಇರುವದರಿಂದ ಅವರು ತಾರುಣ್ಯದ ಹುಮ್ಮಸ್ಸಿನಲ್ಲಿ ಸಾರಾಸಾರ ವಿಚಾರವಿಲ್ಲದೆ ದುಡುಕಿನ ಕೆಲಸವನ್ನು ಕೈಕೊಳ್ಳುವದುಂಟು. ಆದ್ದರಿಂದ ಹಿರಿಯರಾದ ಮತ್ತು ಹೆಚ್ಚು ಅನುಭವವುಳ್ಳ ಸದಸ್ಯರಿರುವ ಮೇಲ್ಮನೆಯು ಕೆಳಮನೆಯ ಅವಸರದ, ಅವಿಚಾರದ ಮತ್ತು ದುಡುಕಿನ ಕೆಲಸಗಳಿಗೆ ತಡೆಹಾಕುತ್ತದೆ.

ii) ಕಾಯದೆಗಳು ಕೆಳಮನೆಯಲ್ಲಿ ಪಾಸಾಗಿ ಮೇಲ್ಮನೆಯಲ್ಲಿ ಚರ್ಚೆಗೆ ಬರುವ ಪೂರ್ವದಲ್ಲಿ ಜನರಿಗೆ ಸಾರ್ವಜನಿಕ ಭಾಷಣಗಳಲ್ಲಿ ಮತ್ತು ಪತ್ರಿಕೆಗಳಲ್ಲಿ ತುಮ್ಮ ಅಭಿಪ್ರಾಯಗಳನ್ನು ವ್ಯಕ್ತಮಾಡಲು ಸಾಕಷ್ಟು ಅನುವುದೊರೆಯುತ್ತದೆ.

iii) ಚುನಾವಣೆಯಲ್ಲಿ ಆರಿಸಲ್ಪಡದೆ ಇದ್ದ ಯೋಗ್ಯ ಜನರನ್ನು ಮೇಲ್ಮನೆಯಲ್ಲಿ ನೇಮಿಸಿಕೊಂಡು ಅವರ ಜ್ಞಾನಭಾಂಡಾರವನ್ನು ದೇಶದ ಹಿತಕ್ಕಾಗಿ ಉಪಯೋಗಿಸಲು ಅವಕಾಶವು ದೊರೆಯುತ್ತದೆ.

iv) ಮೇಲ್ಮನೆಯಲ್ಲಿ ಬಂಡವಲುಗಾರರಿಗೆ ಮತ್ತು ದೊಡ್ಡ ವ್ಯಾಪಾರಸ್ಥರಿಗೆ ಪ್ರಾತಿನಿಧ್ಯ ಕೊಡಲು ಸಹಾಯವಾಗುತ್ತದೆ.

v) ಸಂಯುಕ್ತ ಸರಕಾರ ಪದ್ಧತಿಯಂತೂ ಇಮ್ಮನೆಯ ಪದ್ಧತಿಯಿರುವದೇ ಹೆಚ್ಚು ಒಳಿತು. ಏಕೆಂದರೆ ಕೆಳಮನೆಯ ಸದಸ್ಯರನ್ನು ಜನಸಂಖ್ಯೆಯ ತತ್ವದಮೇರೆಗೆ ಆರಿಸುವದರಿಂದಲೂ, ಮೇಲ್ಮನೆಯ ಸದಸ್ಯರ ಸಂಖ್ಯೆಯನ್ನು ಘಟಕಗಳಲ್ಲಿ ಬಹುಶಃ ಸರಿಯಾಗಿ ಹಂಚುವದರಿಂದಲೂ

ಸಂಯುಕ್ತ ಸರಕಾರದಲ್ಲಿ ಚಿಕ್ಕ ದೊಡ್ಡ ಘಟಕಗಳ ಹಿತರಕ್ಷಣೆಯು ಏಕ ಕಾಲಕ್ಕೆ ಸಾಧಿಸಲ್ಪಡುತ್ತದೆ. ಇದರಿಂದ ಘಟಕಗಳಲ್ಲಿ ಎಷ್ಟೋ ವ್ಯತ್ಯಾಸ ವಿದ್ದರೂ ಅವುಗಳ ದರ್ಜೆಯು ಸಮಾನವೆಂದು ವ್ಯಕ್ತವಾಗುತ್ತದೆ.

ಹಾನಿಗಳು:— i) ಸರಕಾರದ ಕೆಲಸವು ಪುನರುಕ್ತಿಯಾಗಿ ಕಾರ್ಯ ವಿಲಂಬವಾಗುವದರಿಂದ ಸರಕಾರದ ಭದ್ರತೆಯ ಮೇಲೆ ಅನಿಷ್ಟ ಪರಿಣಾಮ ಗಳಾಗುತ್ತದೆ.

ii) ಮೇಲ್ಮನೆಯಿರುವದರಿಂದ ನಿರರ್ಥಕವಾಗಿ ಸರಕಾರದ ಹಣವು ವೆಚ್ಚವಾಗುತ್ತದೆ.

iii) ಮೇಲ್ಮನೆಯಲ್ಲಿ ಸಾಮಾನ್ಯವಾಗಿ ಪ್ರಗತಿಗೆ ವಿರೋಧಕರಾದ ಜನರ ಸಂಖ್ಯೆಯೇ ಹೆಚ್ಚಿರುವದರಿಂದ ದೇಶದ ಪ್ರಗತಿಗೆ ತಡೆಯುಂಟಾ ಗುತ್ತವೆ.

ಅನುಭವದಿಂದ ಕಂಡುಬಂದುದೇನೆಂದರೆ, ಮೇಲ್ಮನೆಯಲ್ಲಿ ಸಾಮಾನ್ಯ ವಾಗಿ ದೇಶದ ಪ್ರಗತಿಗೆ ವಿಘಾತಕವಾದ ಪ್ರವೃತ್ತಿಯೇ ಹೆಚ್ಚಿರುವದರಿಂದ ದೇಶದ ಪ್ರಗತಿಯು ತಡೆಯಲ್ಪಡುತ್ತದೆ. ಇದು ಕ್ವಚಿತ್ತವಾಗಿ ಕೆಳಮನೆಯ ಆವಸರದ ಕೆಲಸಕ್ಕೆ ತಡೆಹಾಕುತ್ತದೆ. ಇದಲ್ಲದೆ ಮೇಲಿಂದ ಮೇಲೆ ಎರಡೂ ಮನೆಗಳ ನಡುವೆ ತಿಕ್ಕಾಟ ಹುಟ್ಟಿ ಬಗೆಹರಿಯದ ಬಿಕ್ಕಟ್ಟು (Dead lock) ಗಳುಂಟಾಗಬಹುದು. ಒಬ್ಬ ವಿಮರ್ಶಕನು ಸುಂದರವಾಗಿ ಹೇಳಿ ದಂತೆ:— 'ಮೇಲ್ಮನೆಯು ಕೆಳಮನೆಯಂತೆಯೇ ಅಭಿಪ್ರಾಯಪಟ್ಟರೆ ಅದರ ಅಸ್ತಿತ್ವವು ಅನಾವಶ್ಯಕವು; ಅದರ ಅಭಿಪ್ರಾಯವು ವಿರುದ್ಧವಿದ್ದರೆ ಅದು ಮಾರಕವಾಗುತ್ತದೆ.'

## ಚುನಾವಣೆ (Election)

ಮತದಾನದ ಹಕ್ಕುಳ್ಳವರಿಗೆಲ್ಲ ಕೂಡಿ ಒಟ್ಟಾಗಿ ಮತದಾರ ಸಂಘ ವೆಂದು ಅನ್ನುತ್ತಾರೆ. ಮತದಾರ ಯಾದಿ (electoral roll)ಯಲ್ಲಿ ಮತ ದಾರರ ಹೆಸರುಗಳಿರುತ್ತವೆ. ಸಾಮಾನ್ಯ ಮತದಾರ ಸಂಘದಲ್ಲಿ (general electorate) ಮತದಾರನ ಜಾತಿ ಮತ ಪಂಥಗಳನ್ನು ಲಕ್ಷಿಸುವುದಿಲ್ಲ.

ಮುಸಲ್ಮಾನೇತರ ಮತದಾರ ಸಂಘದಲ್ಲಿ ಆ ನಿರ್ದಿಷ್ಟವಾದ ಪ್ರದೇಶದಲ್ಲಿ ಇರುವ ಮುಸಲ್ಮಾನೇತರ ಮತದಾರರ ಸೇರ್ಪಡೆಯಾಗಿರುತ್ತದೆ. ಜಾತೀಯ ಮತದಾರ ಸಂಘದಲ್ಲಿ (Communal electorate) ದಲ್ಲಿ ಮತದಾರನು ಆ ವಿಶಿಷ್ಟ ಜಾತಿಯವನಿರಬೇಕೆಂದೇ ಮುಖ್ಯವಾದ ತತ್ವವು. ಅಲ್ಪ ಸಂಖ್ಯಾಕರ ಹಿತರಕ್ಷಣೆಗಾಗಿ ಈ ಜಾತೀಯ ಮತದಾರರ ಸಂಘಗಳನ್ನು ಅಸ್ತಿತ್ವದಲ್ಲಿ ತರಲಾಗಿದೆ ಎಂದು ಹೇಳುತ್ತಾರೆ. ಆದರೆ ಇದರಿಂದ ಜಾತೀಯ ಮತಭೇದಗಳೂ ಮತ್ತು ದ್ವೇಷಾಸೂಯೆಗಳೂ ಬೆಳೆಯುತ್ತವೆ. ೧೯೩೨ನೇ ಇಸ್ವಿಯ ಆಗಸ್ಟ ೧೯ನೇ ತಾರೀಖಿನ ಜಾತೀಯತೆಯ ತೀರ್ಪಿನ (Communal award) ಪ್ರಕಾರ ಕೆಲವು ಸ್ಥಳಗಳು ಮುಸಲ್ಮಾನ, ಶೀಖ ಮತ್ತು ಹಿಂದೀ ಕ್ರಿಶ್ಚಿಯನ್‌ರಿಗೆ ಕಾಯ್ದಿಡಲ್ಪಟ್ಟವು ಮುಂದೆ ಅದೇ ವರಷದ ಪುಣೆ ಒಪ್ಪಂದದ (Poona pact) ಮೇರೆಗೆ ಅಸ್ಪೃಶ್ಯರಿಗೂ ಕೆಲವು ಸ್ಥಳ ಗಳನ್ನು ಕಾಯ್ದಿಡಬೇಕೆಂದು ನಿರ್ಧರಿಸಲಾಯಿತು. ಈ ಒಪ್ಪಂದದನ್ವಯ ಹಿಂದುಳಿದ ವರ್ಗದವರು ಮೊದಲು ಚುನಾವಣೆಯಲ್ಲಿ ತಮಗಾಗಿ ಕಾದಿಟ್ಟ ಸ್ಥಳಗಳಲ್ಲಿ ಪ್ರತಿಯೊಂದಕ್ಕೆ ನಾಲ್ಕರಂತೆ ಹುರಿಯಾಳುಗಳನ್ನು ಆರಿಸುತ್ತಾರೆ. ಹೀಗೆ ಹಿಂದುಳಿದವರಿಂದಲೇ ಆರಿಸಲ್ಪಟ್ಟ ಹುರಿಯಾಳುಗಳು ಸಾಮಾನ್ಯ ಚುನಾವಣೆಯಲ್ಲಿ ಹೋರಾಡುತ್ತಾರೆ. ಮತ್ತು ಆ ನಾಲ್ವರಲ್ಲಿ ಎಲ್ಲಕ್ಕೂ ಹೆಚ್ಚು ಮತಗಳನ್ನು ಪಡೆದವನೇ ಆರಿಸಿ ಬರುತ್ತಾನೆ

ಸಮ್ಮಿಶ್ರ ಮತದಾರ ಸಂಘ (Mixed Electorate) ದಲ್ಲಿ ಕೆಲ ವೊಂದು ಸ್ಥಳಗಳು ಆಯಾ ಜಾತಿಯ ಜನರಿಗೆ ಕಾಯ್ದಿಡಲ್ಪಡುತ್ತವೆ. ಆದರೆ ಚುನಾವಣೆ ಕಾಲಕ್ಕೆ ಮತದಾರರ ಜಾತಿ ಮತಗಳನ್ನು ಲಕ್ಷಿಸ ಲಾಗುವದಿಲ್ಲ. ಇದಲ್ಲದೆ ಕೆಲವು (Special Electorate) ವಿಶಿಷ್ಟ ಮತ ದಾರ ಸಂಘಗಳಿವೆ. ಇದನ್ನು ಜಮೀನದಾರರು, ವ್ಯಾಪಾರಸ್ಥರು, ಶೈಕ್ಷ ಣಿಕ ಸಂಸ್ಥೆಗಳು ಇವುಗಳ ಹಿತರಕ್ಷಣೆಯನ್ನು ಮಾಡುವದಕ್ಕಾಗಿ ನಿರ್ಮಿಸ ಲಾಗಿದೆ.

**ಭಾರತದ ಹೊಸ ರಾಜ್ಯಘಟನೆಯಲ್ಲಿ ಜಾತೀಯ ಮತದಾನ ಪದ್ಧತಿಯನ್ನು ಸಂಪೂರ್ಣವಾಗಿ ತೆಗೆದೊಗೆಯಲಾಗಿದೆ.**

**ಪ್ರತ್ಯಕ್ಷ ಚುನಾವಣೆ:—** ಜನರು ಹುರಿಯಾಳಗಳನ್ನು ಪ್ರತ್ಯಕ್ಷ ವಾಗಿ ಆರಿಸುವ ಪದ್ಧತಿಗೆ ಪ್ರತ್ಯಕ್ಷ ಚುನಾವಣೆಯೆಂದು ಹೆಸರು, ಅಪ್ರತ್ಯಕ್ಷ

ಚುನಾವಣೆಯ ಪದ್ಧತಿಯಲ್ಲಿ ಒಂದು ಸಂಸ್ಥೆಗೆ ಪ್ರತ್ಯಕ್ಷ ಚುನಾವಣೆಯಿಂದ ಆರಿಸಿ ಹೋದ ಸದಸ್ಯರು ಇನ್ನೊಂದು ಸಂಸ್ಥೆಗೆ ತಾವೇ, ತಮ್ಮಲ್ಲಿಯೇ ಚುನಾವಣೆಯನ್ನು ಮಾಡಿಕೊಂಡು ಸದಸ್ಯರನ್ನು ಆರಿಸಿ ಕಳುಹಿಸುತ್ತಾರೆ.

**ಪ್ರತ್ಯಕ್ಷ ಚುನಾವಣೆಯ ಲಾಭಗಳು:—**

i) ಜನರ ಮತ್ತು ಹುರಿಯಾಳುಗಳ ನಡುವೆ ಪ್ರತ್ಯಕ್ಷ ಸಂಬಂಧವು ಬರುತ್ತದೆ.

ii) ಇಲ್ಲಿ ಲಂಚಗುಳಿತನಕ್ಕೆ ಅಷ್ಟೊಂದು ಆಸ್ಪದವಿಲ್ಲ.

**ಅಪ್ರತ್ಯಕ್ಷ ಚುನಾವಣೆಯ ಲಾಭಗಳು:—**

i) ಮತದಾರ ಸಂಘಗಳು ಪ್ರತ್ಯಕ್ಷ ಚುನಾವಣೆಯಲ್ಲಿದ್ದಂತೆ ಅಷ್ಟೊಂದು ವಿಶಾಲವಾಗಿರುವದಿಲ್ಲ.

ii) ಪ್ರತ್ಯಕ್ಷ ಚುನಾವಣೆಯಲ್ಲಿದ್ದಂತೆ ಸದಸ್ಯರ ಸಂಖ್ಯೆಯಾದರೂ ದೊಡ್ಡದಿರುವದಿಲ್ಲ

**ಅಪ್ರತ್ಯಕ್ಷ ಚುನಾವಣೆಯ ಹಾನಿಗಳು:—**

ಅಪ್ರತ್ಯಕ್ಷ ಚುನಾವಣೆಗಾಗಿ ಹೇಳುವ ಯುಕ್ತಿಗಳು ಶುದ್ಧವಾದವುಗಳಲ್ಲ. ಶಾಸನ ಮಂಡಲಗಳ ಸದಸ್ಯರ ಸಂಖ್ಯೆಯು ತುಸು ಬೆಳೆದರೂ ಅದರಿಂದ ಯಾವ ಗೊಂದಲವೂ ಮತ್ತು ಅನಾನುಕೂಲವೂ ಆಗಲಾರದು. ಮತದಾರ ಸಂಘದ ಕ್ಷೇತ್ರವು ಬೆಳೆಯುವದೆಂಬ ಭೀತಿಯು ಅಸಮಂಜಸವಾದುದು. ಯಾಕಂದರೆ ಅಮೇರಿಕೆಯ ಸಂಯುಕ್ತ ಸಂಸ್ಥಾನ ಮುಂತಾದ ದೇಶಗಳಲ್ಲಿ ಹಿಂದುಸ್ತಾನದಲ್ಲಿರುವದಕ್ಕಿಂತ ಹೆಚ್ಚು ವಿಶಾಲವಾದ ಮತದಾರರ ಸಂಘಗಳಿವೆ. ಒಟ್ಟಿನ ಮೇಲೆ ಆಗುವ ದುಷ್ಪರಿಣಾಮಗಳೆಂದರೆ:—

i) ಜನರು ಮತ್ತು ಹುರಿಯಾಳುಗಳ ನಡುವೆ ಪ್ರತ್ಯಕ್ಷ ಸಂಬಂಧವು ಬರುವದೇ ಇಲ್ಲ.

ii) ಮತದಾರರ ಸಂಖ್ಯೆಯು ಪರಿಮಿತವಿರುವದರಿಂದ ಲಂಚಗುಳಿತನಕ್ಕೆ ಹೆಚ್ಚು ಆಸ್ಪದವಿರುತ್ತದೆ.

iii) ಮತದಾರರ ಸಂಖ್ಯೆಯು ಪರಿಮಿತವಿರುವದರಿಂದ, ಅವರ ಮೇಲೆ ಒಂದಿಲ್ಲೊಂದು ರೀತಿಯಿಂದ ತಮ್ಮ ವರ್ಚಸ್ಸನ್ನು ಬೀರಿ ಎಷ್ಟೋ ಸಾರೆ ತೀರ ಅಯೋಗ್ಯರಾದ ಜನರು ಆರಿಸಿ ಬರುವದುಂಟು.

### ಅಲ್ಪಸಂಖ್ಯಾಕರು

ಐಕ್ಯಭಾವದಿಂದ ಕೂಡಿದ, ಆದರೆ ದೇಶದ ಒಟ್ಟು ಜನಸಂಖ್ಯೆಯ ಅಲ್ಪಾಂಶವಾಗಿರುವ ಜನರಿಗೆ ಅಲ್ಪಸಂಖ್ಯಾಕರೆನ್ನುವರು. ಇವರಲ್ಲಿರುವ ಐಕ್ಯವು ರಾಜಕೀಯ ಇಲ್ಲವೆ ಜಾತೀಯವಾಗಿರುವದು.

ಅಲ್ಪ ಸಂಖ್ಯಾಕರ ಸಮಸ್ಯೆಯೆಂದರೆ ರಾಜಕೀಯ ಇಲ್ಲವೆ ಜಾತೀಯ್ಯ ಅಲ್ಪಸಂಖ್ಯಾಕರಿಗೆ ಅವರ ಸಂಖ್ಯೆಯ ಪ್ರಮಾಣದಲ್ಲಿ ಇಲ್ಲವೆ ಒಂದು ವಿಶಿಷ್ಟ ವಾದ ಪ್ರಮಾಣದಲ್ಲಿ ಶಾಸನ ಮಂಡಲಗಳಲ್ಲಿ ಸ್ಥಳಗಳನ್ನು ಮೀಸಲಾಗಿಡ ಬೇಕೋ ಎಂಬುದು.

ರಾಜಕೀಯ ಅಲ್ಪಸಂಖ್ಯಾಕರಿಗೆ ಕೆಲವೊಂದು ಸ್ಥಳಗಳನ್ನು ಕಾದಿಡು ವದರಿಂದ ಕೆಳಗಿನ ಲಾಭಗಳಾಗುತ್ತವೆ.

i) ಶಾಸನಮಂಡಲಗಳು ಜನತೆಯ ಅಭಿಪ್ರಾಯವನ್ನು ಪ್ರತಿಬಿಂಬಿ ಸುವ ಕನ್ನಡಿಗಳು. ಆದ್ದರಿಂದ ಈ ಶಾಸನಮಂಡಲಗಳಲ್ಲಿ ಎಲ್ಲ ಬಗೆಯ ಅಭಿಪ್ರಾಯವುಳ್ಳ ಪಕ್ಷಪಂಗಡಗಳಿಗೆ ಸ್ಥಾನವಿರಬೇಕು.

ii) ಅಲ್ಪಸಂಖ್ಯಾಕರು ಅನೇಕ ಮತದಾರ ಸಂಘಗಳಲ್ಲಿ ಹಂಚಿ ಹೋಗಿರುವದರಿಂದ ಅವರಿಗಾಗಿ ವಿಶಿಷ್ಟ ಸ್ಥಾನಗಳನ್ನು ಕಾಯ್ದಿಟ್ಟರೇನೇ ಅವರ ಪ್ರತಿನಿಧಿಗಳು ಆರಿಸಿ ಬಂದು ಅವರ ಹಿತಸಂರಕ್ಷಣೆಯಾಗುತ್ತದೆ.

**ಹಾನಿಗಳು:—** i) ಪರಸ್ಪರ ವಿರುದ್ಧವಾದ ಅಭಿಪ್ರಾಯಗಳುಳ ಸದಸ್ಯರು ಇರುವದರಿಂದ ಶಾಸನ ಮಂಡಲದ ಕಾರ್ಯಕಲಾಪಗಳು ಸುಸೂತ್ರ ವಾಗಿ ಸಾಗುವದಿಲ್ಲ.

ii) ಅನೇಕ ಸಣ್ಣ ಪುಟ್ಟ ಪಕ್ಷಗಳು ಮತ್ತು ಗುಂಪುಗಳು ಇರುವದ ರಿಂದ ಸಂಮಿಶ್ರ ಸರಕಾರವನ್ನು (Coalation Government) ಸ್ಥಾಪಿಸ ಬೇಕಾಗುವದು. ಆದರೆ ಈ ಸಂಮಿಶ್ರ ಸರಕಾರವು ಮೇಲಿಂದ ಮೇಲೆ ಬದ ಲಾಗುವದರಿಂದ ಸಾರ್ವಜನಿಕ ಹಿತವು ಚೆನ್ನಾಗಿ ಸಾಧಿಸಲಾರದು.

iii) ಅಲ್ಪಸಂಖ್ಯಾಕರಿಗಾಗಿ ವಿಶಿಷ್ಟ ಸ್ಥಳಗಳನ್ನು ಕಾಯ್ದಿಡುವದ ರಿಂದ ಅವರು ಯಾವಾಗಲೂ ಅಲ್ಪಸಂಖ್ಯಾಕರಾಗಿಯೇ ಉಳಿಯಲು ಪ್ರಯತ್ನಿಸುತ್ತಾರೆ. ಬಹುಸಂಖ್ಯಾಕರು ಅವರ ಮನಸ್ಸನ್ನು ಬದಲಿಸುವ ಎಷ್ಟೇ ಪ್ರಯತ್ನಪಟ್ಟರೂ ಅದು ನಿಷ್ಪ್ರಯೋಜಕವು.

iv) ಸಂಖ್ಯೆಯ ಪ್ರಮಾಣದಲ್ಲಿ ಸ್ಥಳಗಳನ್ನು ಕಾಯ್ದಿಡುವ ಪದ್ಧತಿಯಿಂದ ಚುನಾವಣೆಯು ಬಹಳೇ ತೊಡಕಿನದೂ ಮತ್ತು ವೆಚ್ಚದ್ದೂ ಆಗುತ್ತದೆ. ಮತ್ತು ಆ ಪದ್ಧತಿಯು ಮತದಾರನಿಗೆ ದಿಗ್ಭ್ರಮೆಯನ್ನುಂಟು ಮಾಡುತ್ತದೆ.

ಜಾತೀಯ ಅಲ್ಪಸಂಖ್ಯಾಕರಿಗಾಗಿ ಸ್ವತಂತ್ರ ಮತದಾರ ಸಂಘಗಳನ್ನು ಸ್ಥಾಪಿಸಿ ಅವರಿಗೆ ಕೆಲವು ವಿಶಿಷ್ಟ ಸ್ಥಾನಗಳನ್ನು ಕೊಡುವದರಿಂದ ಆ ಜಾತಿಯ ಹಿತರಕ್ಷಣೆಯಾಗುವದೆಂದು ತಿಳಿದು ಆ ಪದ್ಧತಿಯಿಂದಲೇ ಆ ಸಮಸ್ಯೆಯನ್ನು ಎದುರಿಸಲಾಗಿತ್ತು. ಆದರೆ ಈ ಪದ್ಧತಿಯು ಕೇವಲ ಹಿಂದುಸ್ತಾನದ ವೈಶಿಷ್ಟ್ಯವಾಗಿದ್ದು ಬೇರೆ ದೇಶಗಳಲ್ಲಿ ಕಂಡುಬರುವದಿಲ್ಲ. ಈ ಪದ್ಧತಿಯಿಂದ ಹಾನಿಗಳೇ ಹೆಚ್ಚಾಗಿ ಆಗುತ್ತವೆ. ಹೇಗೆಂದರೆ,

ಜಾತಿದ್ವೇಷವು ಹೆಚ್ಚಾಗಿ, ರಾಷ್ಟ್ರೀಯತೆಯ ಭಾವನೆಯು ಅಳಿದು ಹೋಗುತ್ತದೆ. ಪ್ರತಿಯೊಂದು ಜಾತಿಯವರು ದೇಶಹಿತವನ್ನು ಲಕ್ಷ್ಯಕ್ಕೆ ತಾರದೆ ತಮ್ಮ ಜಾತಿಯ ಹಿತಕ್ಕಾಗಿ ಹೆಣಗುತ್ತಾರೆ. ಪಾಕಿಸ್ತಾನಕ್ಕಾಗಿ ಬೇಡಿಕೆಯು ಈ ಪದ್ಧತಿಯಲ್ಲಿಯೇ ಉಗಮವಾಯಿತು. ಪರಸ್ಪರರಲ್ಲಿ ಸಹಕಾರ, ಪ್ರೀತಿ ಮತ್ತು ಸಹಾನುಭೂತಿ ಇಲ್ಲದಂತಾಗುತ್ತವೆ. ಈ ಜಾತೀಯ ವಿಷಮತೆಯು ತಿಳವಳಿಕೆಯುಳ್ಳ ಮುಖಂಡರನ್ನು ಕೂಡ ಆವರಿಸುತ್ತದೆ. ತತ್ಪರಿಣಾಮವಾಗಿ ಜಾತೀಯ ಗಲಭೆಗಳು ಮೇಲಿಂದ ಮೇಲೆ ದೇಶದಲ್ಲಿ ಏಳುತ್ತವೆ. ಒಟ್ಟಿನಮೇಲೆ ಅದು ರಾಷ್ಟ್ರಕ್ಕೆ ವಿಘಾತಕವಾದುದೂ ಮತ್ತು ಪ್ರಜಾಪ್ರಭುತ್ವ ತತ್ವಕ್ಕೆ ವಿರುದ್ಧವಾಗಿಯೂ ಇರುವದರಿಂದ ಜಾತೀಯ ದುಷ್ಪರಿಣಾಮಗಳು ಚಿರಕಾಲ ಉಳಿಯುವಂತೆ ಮಾಡುತ್ತದೆ.

ಈ ಅನಿಷ್ಟಗಳನ್ನು ತಪ್ಪಿಸುವದಕ್ಕಾಗಿ ಕೆಳಗಿನ ಉಪಾಯಗಳನ್ನು ಕೈಕೊಳ್ಳಬಹುದು:— i) ಅಲ್ಪಸಂಖ್ಯಾಕರು ಸ್ವತಂತ್ರ ಮತದಾರ ಸಂಘ

ಮತ್ತು ಪ್ರತ್ಯೇಕ ಪ್ರಾತಿನಿಧ್ಯ ಇವುಗಳಿಗೆ ಹೋರಾಡದೆ ಬಹುಸಂಖ್ಯಾಕರ ಸಹಾನುಭೂತಿಯನ್ನು ಪಡೆಯಲು ಪ್ರಯತ್ನಿಸಬೇಕು.

ii) ಘಟನೆಯ ಮೂಲಕವೇ ಅಲ್ಪ ಸಂಖ್ಯಾಕರ ಸಾಂಸ್ಕೃತಿಕ ಮತ್ತು ಧಾರ್ಮಿಕ ಹಕ್ಕುಗಳನ್ನು ಕಾಯುವ ವ್ಯವಸ್ಥೆಯನ್ನು ಮಾಡಬೇಕು. ಸಂಮಿಶ್ರ ಮತದಾರ ಸಂಘಗಳನ್ನು ಸ್ಥಾಪಿಸಿ ಎಲ್ಲ ಪಕ್ಷ ಪಂಗಡಗಳನ್ನು ಸಹಾನುಭೂತಿಯಿಂದ ಅಲ್ಪಸಂಖ್ಯಾಕರು ಪ್ರಾತಿನಿಧ್ಯವನ್ನು ಪಡೆಯಲು ಪ್ರಯತ್ನಿಸಬೇಕು.

iii) ಅಲ್ಪಸಂಖ್ಯಾಕರಿಗೆ ಸಂಬಂಧಿಸಿದ ಕಾನೂನುಗಳನ್ನು ಮಾಡುವಾಗ ಆ ಕಾನೂನುಗಳಿಗೆ ಶಾಸನ ಸಭೆಯೊಳಗಿನ ಅಲ್ಪಸಂಖ್ಯಾಕರ ಪಕ್ಷದ ಬಹುಮತದ ಬೆಂಬಲವಿದ್ದರೆ ಮಾತ್ರ ಆ ಕಾನೂನುಗಳನ್ನು ಜಾರಿಯಲ್ಲಿ ತೆರಬೇಕು.

## ನ್ಯಾಯಶಾಖೆ (Judiciary)

ದೇಶದ ಕಾನೂನುಗಳ ಅರ್ಥವಿವರಣೆಯನ್ನು ಮಾಡಿ ತನ್ನ ಮುಂದೆ ಬಂದ ವ್ಯಾಜ್ಯಗಳನ್ನು ಬಗೆಹರಿಸುವ ಶಾಖೆಗೆ "ನ್ಯಾಯಶಾಖೆ" ಎಂಬ ಹೆಸರು.

ಇದು ಮಹತ್ವವಾದ ಸರಕಾರದ ಅಂಗವು. ಏಕೆಂದರೆ ಸಾಮಾನ್ಯವಾಗಿ ನಾಗರಿಕನ ಹಿತಸಂರಕ್ಷಣೆಯನ್ನು ಮಾಡುತ್ತದೆ. ಅಪರಾಧಿಗಳನ್ನು ಶಿಕ್ಷಿಸಿ ನಿರಪರಾಧಿಗಳಿಗೆ ಹಾನಿ ಇಲ್ಲವೆ ಅಪಾಯವಾಗದಂತೆ ನೋಡಿಕೊಳ್ಳುತ್ತದೆ.

**ಕರ್ತವ್ಯಗಳು:**— i) ದೇಶದ ಕಾಯದೆಗಳಿಗೆ ಅರ್ಥಮಾಡಿ ಅವನ್ನು ತನ್ನೆದುರಿಗೆ ಇದ್ದ ವ್ಯಾಜ್ಯಗಳ ಬಗ್ಗೆ ಅನ್ವಯಿಸಿ ನಿಷ್ಪಕ್ಷಪಾತವಾದ ತೀರ್ಪನ್ನು ಕೊಡುತ್ತದೆ.

ii) ನ್ಯಾಯಾಧೀಶರು ಕೊಟ್ಟ ನಿರ್ಣಯಗಳು, ಅದೇ ಪ್ರಕಾರದ ವ್ಯಾಜ್ಯಗಳು ಹುಟ್ಟಿದಲ್ಲಿ ಕಾಯದೆಗಳಂತೆ ಉಪಯೋಗಿಸಲ್ಪಡುತ್ತವೆ.

iii) ಅಪರಾಧ ಹಾಗೂ ಅನ್ಯಾಯವಾಗದಂತೆ ಪ್ರತಿಬಂಧಕಾಜ್ಞೆ (Injunction) ಗಳನ್ನು ಹೊರಡಿಸುತ್ತದೆ.

iv) ಅಲ್ಪವಯಸ್ಕರ ಆಸ್ತಿಯ ಮೇಲ್ವಿಚಾರಣೆಗಾಗಿ ಪಾಲಕರನ್ನು ನೇಮಿಸುತ್ತದೆ.

ನ್ಯಾಯಾಧೀಶರು ಹಿಂದುಸ್ಥಾನದಲ್ಲಿಯಂತೆ ಕಾರ್ಯಕಾರೀ ಶಾಖೆಯಿಂದ ನೇಮಿಸಲ್ಪಡುತ್ತಾರೆ. ಇಲ್ಲವೆ ಅಮೇರಿಕೆಯ ಕೆಲವು ಸಂಸ್ಥಾನಗಳಲ್ಲಿಯಂತೆ ಆರಿಸಲ್ಪಡುತ್ತಾರೆ. ನ್ಯಾಯಾಧೀಶರು ವಿದ್ಯಾವಂತರೂ, ಬುದ್ಧಿವಂತರೂ, ಸುಸ್ವಭಾವಿಗಳೂ, ನಿಷ್ಪಕ್ಷಪಾತಿಗಳೂ, ನಿರ್ಣಯ ಸ್ವಾತಂತ್ರ್ಯವುಳ್ಳವರೂ ಇರಬೇಕು. ಅವರಿಗೆ ಜ್ಯೂರರ ಇಲ್ಲವೆ ಅಸೆಸರ ಸಹಾಯ ಕೊಡಲ್ಪಡುತ್ತದೆ.

## ಜ್ಯೂರರು ಮತ್ತು ಅಸೆಸರರು:

ಫೌಜದಾರೀ ಖಟ್ಲೆಗಳನ್ನು ನಡೆಸುವಾಗ ನ್ಯಾಯಾಧೀಶರಿಗೆ ಜ್ಯೂರರ ಇಲ್ಲವೆ ಅಸೆಸರರ ಸಹಾಯವು ಕೊಡಲ್ಪಡುತ್ತದೆ. ಇವರು ಸಮಾಜದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದವರಾಗಿರುತ್ತಾರೆ. ಇವರು ಕಾಯದೆಗಳಲ್ಲಿ ತಜ್ಞರಿರದಿದ್ದರೂ ತಮ್ಮ ಬುದ್ಧಿ ಹಾಗೂ ಸಾಮಾನ್ಯ ವ್ಯವಹಾರಜ್ಞಾನವನ್ನು ಉಪಯೋಗಿಸಿ ಸಂಪೂರ್ಣ ಖಟ್ಲೆಯನ್ನು ಕೇಳಿದ ಮೇಲೆ ತಮ್ಮ ನಿರ್ಣಯವನ್ನು ಕೊಡುತ್ತಾರೆ. ಇದರಿಂದ ಅಪರಾಧಿಗಳ ಮನಸ್ಸಿನಲ್ಲಿ ತೀರ್ಪಿನ ನಿಷ್ಪಕ್ಷಪಾತತನದ ಬಗ್ಗೆ ವಿಶ್ವಾಸ ಹುಟ್ಟುತ್ತದೆ. ಮತ್ತು ಈ ಪದ್ಧತಿಯಿಂದ ಹೆಚ್ಚು ಯೋಗ್ಯವಾದ ನ್ಯಾಯವು ದೊರಕುವದೆಂದು ನಂಬಲಾಗಿದೆ. ಜ್ಯೂರರ ಇಲ್ಲವೆ ಅಸೆಸರರ ಸಂಖ್ಯೆಯು ಸಾಮಾನ್ಯವಾಗಿ ವಿಷಮವಾಗಿರುತ್ತದೆ. (೫ ಇಲ್ಲವೆ ೭) ಹೀಗೆ ಅಸೆಸರ ಜನರ ನಿರ್ಣಯವು ನ್ಯಾಯಾಧೀಶನ ಮೇಲೆ ಬಂಧನಕಾರವಿರುವದಿಲ್ಲ. ಆದರೆ ಜ್ಯೂರಿ ಜನರ ಅಭಿಪ್ರಾಯವು ಬಂಧನಕಾರವಾಗಿರುತ್ತದೆ. ನ್ಯಾಯಾಧೀಶನ ಅಭಿಪ್ರಾಯವು ಜ್ಯೂರಿಗಳ ಅಭಿಪ್ರಾಯಕ್ಕಿಂತ ಭಿನ್ನವಾಗಿದ್ದರೆ ಅವನು ಅದರಂತೆ ಕಾಣಿಸಿ ಕೊನೆಯ ನಿರ್ಣಯಕ್ಕಾಗಿ ಆ ವ್ಯಾಜ್ಯವನ್ನು ಮೇಲ್‌ಕೋರ್ಟಿನ ಕಡೆಗೆ ಕಳುಹಿಸುತ್ತಾನೆ.

## ಅಧಿಕಾರಿಗಳ ವಿಕೇಂದ್ರೀಕರಣ (Separation of Powers)

ಮೊದಲು ಮೂರೂ ಅಧಿಕಾರಿಗಳನ್ನು (ಕಾರ್ಯಕಾರೀ, ಕಾಯದೆ, ವಿಧಾಯಕ ಮತ್ತು ನ್ಯಾಯ) ಒಬ್ಬನ ಕೈಯಲ್ಲಿಯೇ ಕೊಡಲಾಗುತ್ತಿತ್ತು.

(ಉದಾ:—ಅರಸ) ಇದರಿಂದ ಸರಕಾರದಲ್ಲಿ ಒಂದು ತರಹದ ಐಕ್ಯವು ಉಂಟಾಗುತ್ತದೆಂದು ಹಲವರ ಅಭಿಪ್ರಾಯ. ಸರಕಾರವು ಮಾನವನ ಶರೀರದಂತೆ ಒಂದು ಏಕವಾದ ಸಂಸ್ಥೆಯಿದ್ದು ಅದರಲ್ಲಿ ಭಿನ್ನ ಭಿನ್ನ ಶಾಖೆಗಳನ್ನು ಕಲ್ಪಿಸುವದು ಉಚಿತವಲ್ಲವೆಂದು ಇವರು ವಾದಿಸುತ್ತಾರೆ. ಆದರೆ ಆಧುನಿಕಸರಕಾರದಲ್ಲಿ ಈ ಮೂರೂ ಅಧಿಕಾರಗಳನ್ನು ಒಬ್ಬನೇ ನಡೆಯಿಸುವದು ಬಹಳೇ ತೊಡಕಿನದಾಗಿರುತ್ತದೆ. ಇದಲ್ಲದೆ ಒಬ್ಬನ ಕೈಯಲ್ಲಿ ಯಾವತ್ತೂ ಅಧಿಕಾರಗಳನ್ನು ಕೊಟ್ಟರೆ ವ್ಯಕ್ತಿಸ್ವಾತಂತ್ರ್ಯಕ್ಕೆ ಬಾಧೆ ಬರುತ್ತದೆಂದು ಕೆಲವರ ಅಭಿಪ್ರಾಯ. ಇದಲ್ಲದೆ ಇದು ಒಂದು ತರಹದ ದಬ್ಬಾಳಿಕೆ ಇದ್ದಂತೆಯೇ ಆಗುತ್ತದೆ. ಅಧಿಕಾರಗಳನ್ನು ಬೇರ್ಪಡಿಸುವದರಿಂದ ಆಡಳಿತೆಯಲ್ಲಿ ಕೌಶಲ್ಯ ಉಂಟಾಗುತ್ತದೆ. ಮತ್ತು ಅನಿಯಂತ್ರಿತವಾದ ಆಳಿಕೆಯನ್ನು ತಡೆಗಟ್ಟುತ್ತದೆ ಆದರೆ ಅಧಿಕಾರಗಳನ್ನು ಸಂಪೂರ್ಣವಾಗಿ ಗೆರೆಹೊಡೆದು ವಿಂಗಡಿಸುವದು ತೀರ ಅಸಾಧ್ಯವು. ಏಕೆಂದರೆ ಅವು ಒಂದಕ್ಕೊಂದು ನಿಕಟವಾಗಿ ಸಂಬಂಧಿಸಿದವುಗಳಾಗಿರುತ್ತವೆ.

---

# ಅಧ್ಯಾಯ ೫

## ರಾಷ್ಟ್ರವೂ, ರಾಜ್ಯಘಟನಾಯಂತ್ರವೂ

ರಾಷ್ಟ್ರ:—ಒಂದು ವಿಶಿಷ್ಟವಾದ ಪ್ರದೇಶದಲ್ಲಿ ಸ್ಥಿರವಾಗಿ ವಾಸಿಸುವ, ಸ್ವತಂತ್ರವಾದ, ಬಾಹ್ಯ ಬಂಧನಗಳಿಗೆ ಒಳಗಾಗದ, ಸುವ್ಯವಸ್ಥಿತವಾದ ಸರಕಾರಕ್ಕೆ ಯಾವಾಗಲೂ ವಿಧೇಯರಾಗಿರುವ ಮತ್ತು ಸಾಕಷ್ಟು ದೊಡ್ಡ ಸಂಖ್ಯೆಯುಳ್ಳ ಜನರ ಸಮುದಾಯಕ್ಕೆ ರಾಷ್ಟ್ರವೆಂದೆನ್ನುವರು.
**ರಾಷ್ಟ್ರಕ್ಕೆ ಮುಖ್ಯವಾಗಿ ನಾಲ್ಕು ಲಕ್ಷಣಗಳಿರುತ್ತವೆ:—**

i) **ಪ್ರದೇಶ:**—ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಅಲೆದಾಡುವ ತಂಡಗಳು ರಾಷ್ಟ್ರಗಳಾಗಲಾರವು. ರಾಷ್ಟ್ರವಾಗಬೇಕಾದರೆ ಜನರು ಒಂದು ವಿಶಿಷ್ಟವಾದ ಪ್ರದೇಶದಲ್ಲಿ ನೆಲಿಸಲೇಬೇಕು. ಪ್ರದೇಶದ ಕ್ಷೇತ್ರ ಅಷ್ಟೊಂದು ಮಹತ್ವದ್ದಲ್ಲವಾದರೂ ಅದು ಬೆಳೆಯುವ ಜನಸಂಖ್ಯೆಗೆ ಸಾಲುವಷ್ಟು ದೊಡ್ಡದಿರಬೇಕು.

ii) **ಜನವಸತಿ:**— ಜನವಿಲ್ಲದೆ ರಾಷ್ಟ್ರವಾಗಲಾರದು. ಜನವೇ ರಾಷ್ಟ್ರದ ಜೀವಾಳ. ಆದರೂ ಜನಸಂಖ್ಯೆಯು ಇಷ್ಟೇ ಇರಬೇಕೆಂಬ ನಿರ್ಬಂಧವಿಲ್ಲ. ರಾಷ್ಟ್ರಕ್ಕೆ ಆರ್ಥಿಕ ಸ್ಥಿರತೆಯು ಪ್ರಾಪ್ತವಾಗುವಷ್ಟು ಮತ್ತು ಪರಚಕ್ರಗಳನ್ನು ತಡೆಯುವಷ್ಟು ಅದು ದೊಡ್ಡದಾಗಿರಬೇಕು.

iii) **ಸರಕಾರ:**— ರಾಷ್ಟ್ರದೊಳಗಿನ ಜನರೆಲ್ಲರೂ ರಾಷ್ಟ್ರದ ರಾಜಕೀಯ, ಸಾಮಾಜಿಕ, ಮತ್ತು ಆರ್ಥಿಕ ವಿಷಯಗಳನ್ನು ನಿರ್ವಹಿಸಿಕೊಂಡು ಹೋಗಲಾರರು. ಈ ಕಾರ್ಯಕ್ಕೆ ಒಂದು ವಿಶಿಷ್ಟವಾದ ಜನರ ಗುಂಪು ಅವಶ್ಯಕ. ಹೀಗೆ ರಾಷ್ಟ್ರದ ಸೂತ್ರಗಳನ್ನುವಹಿಸಿದ, ರಾಷ್ಟ್ರದ ಕಾರ್ಯಗಳನ್ನು ಈಡೇರಿಸುವ ಕೆಲವು ಅಧಿಕಾರಿಗಳ ಗುಂಪಿಗೆ ಸರಕಾರವೆನ್ನುವರು. ಸರಕಾರವು ರಾಷ್ಟ್ರದ ಒಂದು ಮುಖ್ಯವಾದ ಅಂಶವು.

iv) **ಸಾರ್ವಭೌಮತ್ವ:**—(Sovereignty) ರಾಷ್ಟ್ರದ ಅಧಿಕಾರವು ಸರ್ವಶ್ರೇಷ್ಠವಾದದ್ದು. ಹೊರಗಿನವರು ಅದರಮೇಲೆ ಅಧಿಕಾರವನ್ನು ನಡಿಸಲಾರರು. ರಾಷ್ಟ್ರದೊಳಗಿನ ವ್ಯಕ್ತಿಗಳಾಗಲಿ, ಸಂಘಸಂಸ್ಥೆಗಳಾಗಲಿ, ಅದರ ಅಧಿಕಾರವನ್ನು ಅಲ್ಲಗಳೆಯಲಾರವು. ತಮ್ಮ ಹಿತಾಹಿತದ ಕಲ್ಪನೆಯನ್ನು ಬದಿಗಿಟ್ಟು ಎಲ್ಲರೂ ರಾಷ್ಟ್ರದ ಇಚ್ಛಾನುವರ್ತಿಯಾಗಿ ವರ್ತಿಸಬೇಕು ವ್ಯಕ್ತಿಗಳ ಮತ್ತು ಸಂಘಗಳ ಹಿತಕ್ಕಿಂತಲೂ ರಾಷ್ಟ್ರದ ಹಿತವೇ ಮೇಲು. ಮತ್ತು ಅದಕ್ಕಾಗಿ ಎಲ್ಲರೂ ಹೆಣಗಬೇಕು. ರಾಷ್ಟ್ರದ ಅಧಿಕಾರವನ್ನು ಮೀರಿದವರಿಗೆ ಅದು ತನ್ನ ಅಪರಿಮಿತವಾದ ಶಕ್ತಿಯನ್ನು ಉಪಯೋಗಿಸಿ, ಮರಣ ದಂಡನೆ, ಆಸ್ತಿಯನ್ನು ಜಪ್ತಮಾಡುವದು, ಗಡಿಪಾರು ಮಾಡುವದು, ಮುಂತಾದ ಶಿಕ್ಷೆಗಳನ್ನು ವಿಧಿಸುತ್ತದೆ.

೧೯೪೭ರ ಅಗಸ್ಟ ೧೫ ರಿಂದ ಹಿಂದುಸ್ತಾನಕ್ಕೆ ಸ್ವಾತಂತ್ರ್ಯವು ದೊರಕಿದ್ದರಿಂದ ರಾಷ್ಟ್ರದ ಎಲ್ಲ ಅಂಶಗಳೂ ಅದಕ್ಕೆ ಪ್ರಾಪ್ತವಾಗಿವೆ. ಅಲ್ಲಿಯವರೆಗೆ ಅದರಲ್ಲಿ 'ಸಾರ್ವಭೌಮತ್ವ' ಅಂಶವು ಇಲ್ಲದ್ದರಿಂದ ಅದು ರಾಷ್ಟ್ರವಾಗಿರಲಿಲ್ಲ ಆದರೆ ಈಗ ಆ ಅಂಶವು ಕೂಡ ಬಂದುದರಿಂದ ಹಿಂದುಸ್ತಾನವು ಒಂದು ರಾಷ್ಟ್ರವಾಗಿದೆ.

**ರಾಷ್ಟ್ರ ಮತ್ತು ಸರಕಾರ:**— ರಾಷ್ಟ್ರದಲ್ಲಿ ಮೇಲೆ ವಿವರಿಸಿದ ನಾಲ್ಕೂ ಅಂಶಗಳಿರಬೇಕು. ಸರಕಾರವು ಆ ನಾಲ್ಕು ಅಂಶಗಳಲ್ಲಿಯದೊಂದು. ಅದು ರಾಷ್ಟ್ರದ ಮಹತ್ವವಾದ ಘಟಕ. ಅದು ರಾಷ್ಟ್ರದ ಧೋರಣೆಯನ್ನು ನಿಶ್ಚಿತಗೊಳಿಸಿ ಅದರ ಆಡಳಿತೆಯನ್ನು ಸಾಗಿಸುವ ಯಂತ್ರ. ಪ್ರತಿಯೊಬ್ಬ ಮನುಷ್ಯನು ರಾಷ್ಟ್ರಕ್ಕೆ ಸೇರಿದವನಿರುತ್ತಾನೆ. ಆದರೆ ಸರಕಾರದಲ್ಲಿ ಕೆಲವು ವಿಶಿಷ್ಟವಾದ ವ್ಯಕ್ತಿಗಳು ಮಾತ್ರ ಸೇರುತ್ತಾರೆ.

**ರಾಜ್ಯಘಟನೆ (Constitution)**

ರಾಜ್ಯಘಟನೆಯೆಂದರೆ ಸರಕಾರದ ರಚನೆ ಮತ್ತು ಕರ್ತವ್ಯಗಳನ್ನು ನಿರ್ದಿಷ್ಟಗೊಳಿಸಿ ವಿವಿಧ ಅಂಗಗಳಲ್ಲಿ ಅಧಿಕಾರಗಳನ್ನು ಹಂಚುವ ಮಹತ್ವದ ನಿಯಮಾವಳಿಗಳು. ಇದು ಸರಕಾರ ಮತ್ತು ಜನರು ಇವರ ಪರಸ್ಪರ ಸಂಬಂಧವನ್ನು ಗೊತ್ತುಪಡಿಸಿ ಜನರ ಹಿತ ಮತ್ತು ಹಕ್ಕುಗಳ ಸಂರಕ್ಷಣೆಯನ್ನು ಮಾಡುವ ಸಾಧನವು.

**ಲಿಖಿತ ಮತ್ತು ಅಲಿಖಿತ ರಾಜ್ಯಘಟನೆ:—**

ಘಟನೆಯ ಮಹತ್ವದ ನಿಯಮಗಳನ್ನು ನಿರ್ದಿಷ್ಟಗೊಳಿಸಿ ಅವುಗಳನ್ನು ಬರೆದಿಟ್ಟಿದ್ದರೆ ಆ ಘಟನೆಗೆ ಲಿಖಿತ ರಾಜ್ಯಘಟನೆ ಎಂದು ಹೆಸರು. ಹೀಗೆ ಬರೆದಿಡುವದರಿಂದ ಶಂಕೆಗೆ ಆಸ್ಪದವು ಉಳಿಯುವದಿಲ್ಲ. ಮತ್ತು ನಾಗರಿಕರ ಹಕ್ಕುಗಳು ಸುರಕ್ಷಿತವಾಗಿ ಉಳಿಯುತ್ತವೆ ಈ ಪದ್ಧತಿಯನ್ನು ಮುಖ್ಯವಾಗಿ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ಕಾಣಬಹುದು.

ಅಲಿಖಿತ ಪದ್ಧತಿಯಲ್ಲಿ ಯಾವತ್ತೂ ನಿಯಮಾವಳಿಗಳು ಬರೆದಿಡಲ್ಪಟ್ಟಿರುವದಿಲ್ಲ. ಈ ಪದ್ಧತಿಗೆ ದೇಶದಲ್ಲಿಯ ರೂಢಿಗಳು, ಪೂರ್ವ ನಿದರ್ಶನಗಳು (Precedent) ಪರಸ್ಪರ ತಿಳುವಳಿಕೆ, ಮತ್ತು ನ್ಯಾಯಾಧೀಶರ ನಿರ್ಣಯಗಳು ಇವೇ ಆಧಾರಗಳು. ಈ ಪದ್ಧತಿಯು ಹೆಚ್ಚಾಗಿ ಇಂಗ್ಲಂಡದಲ್ಲಿ ಬಳಿಕೆಯಲ್ಲಿದೆ. ಪ್ರಚಲಿತ ರಾಜ್ಯಘಟನೆಯಲ್ಲಿ ಯಾವದೂ ಸಂಪೂರ್ಣವಾಗಿ ಲಿಖಿತ ಇಲ್ಲವೆ ಸಂಪೂರ್ಣವಾಗಿ ಅಲಿಖಿತವಿರುವದಿಲ್ಲ. ಪ್ರತಿಯೊಂದು ಘಟನೆಯು ಎರಡರ ಸಂಮಿಶ್ರಣವಾಗಿದೆ.

**ಪ್ರಧಾನ (Rigid) ಮತ್ತು ಶಿಥಿಲ (Flexible) ರಾಜ್ಯಘಟನೆ**

ರಾಜ್ಯಘಟನೆಯು ಸುಲಭವಾಗಿ ಸಾಮಾನ್ಯವಾದ ಮಸೂದೆಯ ಕ್ರಮದಂತೆ ಬದಲಿಸಲು ಬಾರದಿದ್ದಲ್ಲಿ ಅದಕ್ಕೆ ಸುದುಷ್ಪರಿವರ್ತನೀಯ (Rigid) ರಾಜ್ಯಘಟನೆಯೆಂತಲೂ ಮತ್ತು ಅದನ್ನು ಶಾಸನ ಮಂಡಲದಿಂದ ಸಾಮಾನ್ಯವಾದ ಕಾಯಿದೆಯಂತೆ ಸುಲಭವಾದ ರೀತಿಯಲ್ಲಿ ಬದಲಿಸಲು ಬರುವಂತಿದ್ದರೆ ಅದಕ್ಕೆ ಸುಲಭಪರಿವರ್ತನೀಯ (Flexible) ರಾಜ್ಯಘಟನೆಯೆಂತಲೂ ಅನ್ನುವರು. ಗ್ರೇಟಬ್ರಿಟನ್‌ದ ರಾಜ್ಯಘಟನೆಯು ೨ನೇ ಬಗೆಯದೂ ಮತ್ತು ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ರಾಜ್ಯಘಟನೆಯು ೧ನೇ ಬಗೆಯದೂ ಇವೆ. ಲಿಖಿತ ಮತ್ತು ಸುದುಷ್ಪರಿವರ್ತನೀಯ ಪದ್ಧತಿಗಳು ಉತ್ತಮವಾದವುಗಳೆಂದೂ ತಜ್ಞರ ಅಭಿಪ್ರಾಯ.

**ಸರಕಾರದ ಪ್ರಭೇದಗಳು:—**

ಶಾಸ್ತ್ರಕಾರರಲ್ಲಿ ಸರಕಾರವನ್ನು ವರ್ಗೀಕರಿಸುವ ಬಗ್ಗೆ ಒಮ್ಮತವಿಲ್ಲ. ಹಿಂದಕ್ಕೆ ಗ್ರೀಕ ತತ್ವಜ್ಞಾನಿಯಾದ ಅರಿಸ್ಟಾಟಲನು. ರಾಜ್ಯಸೂತ್ರಗಳನ್ನು

ವಹಿಸಿದವರ ಸಂಖ್ಯೆ ಮತ್ತು ಆಡಳಿತೆಯ ಉದ್ದೇಶ ಇವನ್ನು ಅನುಲಕ್ಷಿಸಿ ಸರಕಾರವನ್ನು ವಿಭಾಗಿಸಿದನು.

ಒಬ್ಬನ ಕೈಯಲ್ಲಿ (ಸಾಮಾನ್ಯವಾಗಿ ರಾಜನ ಕೈಯಲ್ಲಿ) ರಾಜ್ಯಸೂತ್ರಗಳಿದ್ದರೆ ರಾಜಪ್ರಭುತ್ವವೆಂತಲೂ, ಕೆಲಜನರ ಕೈಯಲ್ಲಿ (ಸಾಮಾನ್ಯವಾಗಿ ಉತ್ತಮರಾದ ಶ್ರೀಮಂತರ ಕೈಯಲ್ಲಿ) ರಾಜ್ಯಸೂತ್ರಗಳಿದ್ದರೆ ಉತ್ತಮರ ಪ್ರಭುತ್ವವೆಂತಲೂ ಬಹುಜನರ ಕೈಯಲ್ಲಿ (ಪ್ರಜೆಗಳ ಕೈಯಲ್ಲಿ) ಸೂತ್ರಗಳಿದ್ದರೆ ಪ್ರಜಾಪ್ರಭುತ್ವವೆಂತಲೂ ಸರಕಾರವನ್ನು ವರ್ಗೀಕರಿಸಿದನು. ಆದರೆ ರಾಜ್ಯಸೂತ್ರಗಳನ್ನು ವಹಿಸಿದವರು ಪ್ರಜೆಗಳ ಹಿತವನ್ನು ಲಕ್ಷಿಸದೆ ಸ್ವಾರ್ಥಕ್ಕಾಗಿ ಅಧಿಕಾರವನ್ನು ಉಪಯೋಗಿಸಿದರೆ ಮೇಲಿನ ಮೂರು ಪ್ರಭೇದಗಳು ಅನುಕ್ರಮವಾಗಿ ದಬ್ಬಾಳಿಕೆ (Tyranny) ಅಧಮರ ಪ್ರಭುತ್ವ (Oligarcy), ಮತ್ತು ದೊಂಬಿಯ ಪ್ರಭುತ್ವ (Mobocracy) ಗಳಾಗಿ ಪರಿಣಮಿಸುತ್ತವೆಯೆಂದು ಆತನ ಅಭಿಪ್ರಾಯ.

**ರಾಜ್ಯಪ್ರಭುತ್ವ:—** (Monarchy) ಈ ಪದ್ಧತಿಯಲ್ಲಿ ಒಬ್ಬನ ಕೈಯಲ್ಲಿ ರಾಜ್ಯಸೂತ್ರಗಳಿರುತ್ತವೆ. ಈತನೇ ರಾಜನಾಗಿ ಕೆಲಸ ಮಾಡುತ್ತಾನೆ. ಅರಸೊತ್ತಿಗೆಯು ವಂಶಪರಂಪರೆಯಾಗಿ ಬಂದಿರಬಹುದು ಇಲ್ಲವೆ ಚುನಾವಣೆಯಿಂದ ಬಂದಿರಬಹುದು. ಸಾಮಾನ್ಯವಾಗಿ ಅರಸೊತ್ತಿಗೆಯು ವಂಶಪರಂಪರೆಯಿಂದ ಸಿಗುವದೇ ಹೆಚ್ಚು. ರಾಜಪ್ರಭುತ್ವವು ನಿರಂಕುಶ ಇಲ್ಲವೆ ಮರ್ಯಾದಿತವಾಗಿರಬಹುದು. ನಿರಂಕುಶ ರಾಜಪ್ರಭುತ್ವ ಪದ್ಧತಿಯಲ್ಲಿ ರಾಜನು ಸರಕಾರದ ಎಲ್ಲ ಸೂತ್ರಗಳನ್ನು ವಹಿಸಿಕೊಂಡು ತನ್ನ ಮನಬಂದಂತೆ ಯಾವ ಕಾಯದೇಕಟ್ಟಳೆಗಳಿಗೂ ಒಳಗಾಗದೆ ಆಡಳಿತೆಯನ್ನು ಸಾಗಿಸುತ್ತಾನೆ. ಆದರೆ ಮರ್ಯಾದಿತ ರಾಜಪ್ರಭುತ್ವ ಪದ್ಧತಿಯಲ್ಲಿ ರಾಜನ ಅಧಿಕಾರಕ್ಷೇತ್ರವು ರಾಜ್ಯಘಟನೆಯಿಂದ ಮರ್ಯಾದಿತವಾಗಿರುತ್ತದೆ. ಆತನು ಸಿಂಹಾಸನಾರೂಢನಾಗಿದ್ದರೂ ಹೆಸರಿಗೆ ಮಾತ್ರ ಅರಸನು. ರಾಜ್ಯಕಾರಭಾರವು ಜನರ ಇಚ್ಛೆಯಂತೆ ನಡೆಯುತ್ತದೆ.

**ಲಾಭಗಳು:—** ಇದು ಪುರಾತನವಾದ ಪದ್ಧತಿ. ಎಲ್ಲ ಅಧಿಕಾರಗಳು ಒಬ್ಬನ ಕೈಯಲ್ಲಿಯೇ ಇರುವದರಿಂದ ಆತನಿಗೆ ಜಾಣ್ಮೆಯಿಂದಲೂ ನಿಷ್ಪಕ್ಷ

ಪಾತತನದಿಂದಲೂ ಅಧಿಕಾರವನ್ನು ನಡಿಸಲು ಅನುವಾಗುತ್ತದೆ. ರಾಜ್ಯದಾಡ ಳಿತೆಯಲ್ಲಿ ಸುಸಂಗತವಾದ ಒಂದೇ ಬಗೆಯ ಧೋರಣೆಯಿರುತ್ತದೆ.

ii) ಯೋಗ್ಯ ಅಧಿಕಾರಿಗಳನ್ನು ನೇಮಿಸಿ ಅವರ ಮುಖಾಂತರ ಕಾನೂ ನುಗಳನ್ನು ವಿಲಂಬವಿಲ್ಲದೆ ಜಾರಿಯಲ್ಲಿ ತರಲು ಸಾಧ್ಯವಾಗುತ್ತದೆ.

iii) ಒಬ್ಬನ ಕೈಯಲ್ಲಿಯೇ ಅಧಿಕಾರವಿರುವದರಿಂದ ಜನರಲ್ಲಿರುವ ಅಸಂತೋಷ, ಕಲಹ, ಮುಂತಾದವುಗಳನ್ನು ದೂರಮಾಡಿ ಒಕ್ಕಟ್ಟಿನಿಂದಲೂ ಶಿಸ್ತಿನಿಂದಲೂ ಮತ್ತು ಸುಸಂಗತವಾದ ಒಂದೇ ಧೋರಣೆಯಿಂದಲೂ ಜನ ರನ್ನು ಕೆಲಸ ಮಾಡಹಚ್ಚಲು ಸಾಧ್ಯವಾಗುತ್ತದೆ.

iv) ಆಡಳಿತೆಯ ವೆಚ್ಚವು ಕಡಿಮೆಯಿರುತ್ತದೆ.

v) ಯುದ್ಧಕಾಲದಲ್ಲಿ ಹಾಗೂ ಬಿಕ್ಕಟ್ಟಿನ ಪ್ರಸಂಗಗಳಲ್ಲಿ ರಾಜನು ತನ್ನ ವೈಯಕ್ತಿಕ ವರ್ಚಸ್ಸನ್ನು ಉಪಯೋಗಿಸಿಕೊಂಡು ಪರರಾಜರ ಸಹಾ ಯವನ್ನು ಪಡೆದು, ಬಂದ ವಿಪತ್ತುಗಳನ್ನು ಯಶಸ್ವಿಯಾಗಿ ಎದುರಿಸ ಬಹುದು.

**ಹಾನಿಗಳು:—** i) ಮೇಲೆ ವಿವರಿಸಿದ ಲಾಭಗಳು ರಾಜನು ಯೋಗ್ಯ ನಿದ್ದರೆ ಮಾತ್ರ ದೊರಕುತ್ತವೆ ರಾಜನು ತಿಳಿಗೇಡಿಯೂ, ಅಧಿಕಾರ ಲೋಲುಪನೂ, ಸ್ವಾರ್ಥಪರಾಯಣನೂ ಇದ್ದರೆ, ಯಾವ ಲಾಭಗಳೂ ಲಭಿ ಸದೆ ಕೇವಲ ಹಾನಿಗಳೇ ಆಗುತ್ತವೆ.

ii) ರಾಜ್ಯದಾಡಳಿತೆಯು ಸುಸೂತ್ರವಾಗಿ ಮತ್ತು ಬಿಗುವಿನಿಂದ ಸಾಗಿ ದರೂ ಅದು ಒಳ್ಳೆಯ ಸರಕಾರವಾಗಲಾರದು. ಜನರ ಆಶೆ ಆಕಾಂಕ್ಷೆಗಳು ಪೂರ್ಣವಾದರೆ ಮಾತ್ರ ಒಳ್ಳೇ ಸರಕಾರವಾಗಬಲ್ಲದು.

iii) ರಾಜಸತ್ತೆಯು ವಂಶಪರಂಪರೆಯಾಗಿ ನಡೆಯುವದರಿಂದ ಆ ವಂಶದಲ್ಲಿ ಹುಟ್ಟುವವರೆಲ್ಲರೂ ಒಳ್ಳೆಯವರೇ ಇರುತ್ತಾರೆಂಬುದು ಸಂಶಯದ ಮಾತು. ಅನೇಕ ಸಲ ದುಷ್ಟರೂ ಕ್ರೂರರೂ ಆದ ಅರಸರು ಪಟ್ಟಕ್ಕೆ ಬರು ವದುಂಟು.

**ಉತ್ತಮರ ಪ್ರಭುತ್ವ:—**(Airstocracy) ಉಚ್ಚಕುಲದಲ್ಲಿ ಜನಿ ಸಿದ ಇಲ್ಲವೆ ಸಿರಿವಂತರಾದ ಇಲ್ಲವೆ ಬುದ್ಧಿವಂತರಾದ ಉತ್ತಮರ ಕೈಯಲ್ಲಿ ರಾಜ್ಯಸೂತ್ರಗಳಿರುತ್ತವೆ.

**ಲಾಭಗಳು:**—i) ಇದರಲ್ಲಿ ಯೋಗ್ಯತೆಗೆ ಹಾಗೂ ಶೀಲಕ್ಕೆ ಪ್ರಾಶಸ್ತ್ಯ ಹೆಚ್ಚು. ಬಹು ಜನರ ಅಭಿಪ್ರಾಯಕ್ಕಿಂತ ಉತ್ತಮರಾದ ಕೆಲವೇ ಜನರ ಅಭಿಪ್ರಾಯದಿಂದ ದೇಶಕ್ಕೆ ಲಾಭವಾಗುತ್ತದೆ.

ii) ಇದು ಅನುಭವ ಹಾಗೂ ಶಿಕ್ಷಣಕ್ಕೆ ಮಹತ್ವವನ್ನು ಕೊಡುತ್ತದೆ. ರಾಜ್ಯದಾಡಳಿತೆಯಲ್ಲಿ ಶಿಕ್ಷಣ ಹಾಗೂ ಅನುಭವವನ್ನು ಪಡೆದವರೇ ಉಚ್ಚ ಸ್ಥಾನಗಳಲ್ಲಿರುವದರಿಂದ, ಮತ್ತು ಇವರ ಆಜ್ಞೆಗಳನ್ನೇ ಇತರರು ಪಾಲಿಸುವ ದರಿಂದ ದೇಶಕ್ಕೆ ಹಿತವುಂಟಾಗುತ್ತದೆ.

iii) ಇದರಲ್ಲಿ ಅಧಿಕಾರಕ್ಕೆ ಯೋಗ್ಯ ಮರ್ಯಾದೆ ಸಿಕ್ಕುತ್ತದೆ ಮತ್ತು ಲೋಕರೂಢಿಗೆ ಹೆಚ್ಚು ಮನ್ನಣೆಯು ದೊರೆಯುತ್ತದೆ

iv) ಉತ್ತಮರು ಸಾರಾಸಾರ ವಿಚಾರಮಾಡಿ ಕಾರ್ಯವನ್ನು ಕೈ ಕೊಳ್ಳುವದರಿಂದ ಅವಸರದ ಮತ್ತು ದುಡುಕಿನ ಕೆಲಸಗಳಿಗೆ ಆಸ್ಪದ ಉಳಿ ಯುವದಿಲ್ಲ.

**ಹಾನಿಗಳು:**— i) ನಿಜವಾಗಿಯೂ ಉತ್ತಮರಾದವರನ್ನು ಕಂಡು ಹಿಡಿಯುವದು ಬಹಳ ಬಿಗಿಯಾದ ಕೆಲಸ. ಎಷ್ಟೋ ಸಲ ಉತ್ತಮರೆಂದು ತೋರುವವರ ಹೃದಯವು ನಿರ್ಮಲವಾಗಿರದೆ ದ್ವೇಷ, ಅಸೂಯೆ, ಮೋಸ, ಕಾಪಟ್ಯ ಮುಂತಾದ ದುರ್ಗುಣಗಳ ತವರುಮನೆಯಾಗಿರಬಹುದು.

ii) ಮೊದಲು ಉತ್ತಮರಾಗಿದ್ದವರು ಅಧಿಕಾರವು ಕೈಯಲ್ಲಿ ಬಂದ ಕೂಡಲೇ ಉತ್ತಮರಾಗಿಯೇ ಉಳಿಯುವರೆಂಬ ನಿಯಮವಿಲ್ಲ. ಅವರು, ಸ್ವಾರ್ಥ, ಅಧಿಕಾರಲಾಲಸೆ, ಮುಂತಾದ ದುರ್ಗುಣಗಳಿಗೆ ಒಳಗಾಗಿ ದೊರೆತ ಅಧಿಕಾರದ ದುರುಪಯೋಗವನ್ನು ಮಾಡುವ ಸಂಭವವೇ ಹೆಚ್ಚು.

iii) ಶ್ರೀಮಂತರ ಕೈಯಲ್ಲಿಯೇ ಅಧಿಕಾರವು ಹೆಚ್ಚಾಗಿ ಇರುತ್ತದೆ ಆದರೆ ಅವರ ಕೈಯಲ್ಲಿ ಹಣವಿದ್ದ ಮಾತ್ರಕ್ಕೆ ಅವರು ಉತ್ತಮರಿರುವ ರೆಂತಲ್ಲ. ದುಡ್ಡಿನ ಬಲದಿಂದ ಅವರು ಬೇಕಾದ ದುರಾಚಾರಗಳನ್ನು ಮಾಡ ಬಹುದು.

iv) ಇದು ಎಲ್ಲ ಪ್ರಜೆಗಳ ಅಭಿಪ್ರಾಯಕ್ಕೆ ಮನ್ನಣೆಯನ್ನು ಕೊಡುವ ದಿಲ್ಲ, ಕೆಲವೇ ಜನರ ಅಭಿಪ್ರಾಯವು ಲಕ್ಷಿಸಲ್ಪಡುತ್ತದೆ.

**ಪ್ರಜಾಪ್ರಭುತ್ವ** (Democracy):— ಪ್ರಜಾಪ್ರಭುತ್ವವೆಂದರೆ, ಜನತೆಯ ಕೈಯಲ್ಲಿಯೇ ರಾಜ್ಯಸೂತ್ರಗಳಿರುವ ಸರಕಾರವು. "ಜನತೆಗಾಗಿ ಜನತೆಯಿಂದಲೇ ನಡೆಯಿಸಲ್ಪಡುವ ಜನತಾ ಸರಕಾರವೇ ಪ್ರಜಾಪ್ರಭುತ್ವ" ವೆಂದು ಜಗದ್ವಿಖ್ಯಾತ ಅಬ್ರಾಹಮ್ ಲಿಂಕನ್‌ನು ಹೇಳಿದ್ದಾನೆ. (Gove rnment of the people by the people and for the people) ಪ್ರತಿಯೊಬ್ಬನ ಸೌಖ್ಯವು ಮಹತ್ವವಾದದ್ದು; ಮತ್ತು ಪ್ರತಿಯೊ ಬ್ಬನಿಗೆ ಅವನ ವ್ಯಕ್ತಿತ್ವದ ವಿಕಾಸಕ್ಕೆ ಸಾಕಷ್ಟು ಆಸ್ಪದವಿರಬೇಕು. ಎಂಬ ತತ್ವಗಳೇ ಇದರ ತಳಹದಿಯು. ಅದು ಸಮತೆ ಮತ್ತು ಸ್ವಾತಂತ್ರ್ಯದ ತತ್ವಗಳನ್ನು ಸಾರುತ್ತದೆ. ಪ್ರತಿಯೊಬ್ಬ ನಾಗರಿಕನಿಗೆ ತನಗೆ ಹಿತವಾವು ದೆಂಬುದನ್ನು ಅರಿತು ತನಗೆ ಯೋಗ್ಯ ಕಂಡ ರೀತಿಯಲ್ಲಿ ದೇಶಸೇವೆಯನ್ನು ಮಾಡಲು ಸಂಧಿಯನ್ನು ಒದಗಿಸಿಕೊಡುತ್ತದೆ. ಇದರಲ್ಲಿ ಆಳುವವರೂ ಮತ್ತು ಆಳಲ್ಪಡುವವರೂ ಪ್ರಜೆಗಳೇ. ಪ್ರಜೆಗಳು ಉಚ್ಚವಾದ ರಾಜನೀ ತಿಯ ಮಟ್ಟಕ್ಕೆ ಮುಟ್ಟಿರುತ್ತಾರೆಂಬುದನ್ನು ಇದು ಸೂಚಿಸುತ್ತದೆ. ಪ್ರಜಾ ಪ್ರಭುತ್ವದ ಯಶಸ್ಸಿಗೆ ಕೆಳಗಿನ ಸಂಗತಿಗಳು ಆವಶ್ಯಕ.

i) **ನಾಗರಿಕನ ಪಾತ್ರ:**— ಪ್ರತಿಯೊಬ್ಬ ನಾಗರಿಕನು ತನ್ನ ಪಾತ್ರವನ್ನು ಸರಿಯಾಗಿ ನಿರ್ವಹಿಸಬೇಕು ಈ ಪದ್ಧತಿಯಲ್ಲಿ ಜನತೆ ಯಿಂದಲೇ ಚುನಾಯಿತವಾದ ಸರಕಾರವಿರುವದರಿಂದ ಯೋಗ್ಯವಾದ ಸರಕಾ ರವು ಅಸ್ತಿತ್ವದಲ್ಲಿ ಬರುವಂತೆ ನೋಡಿಕೊಳ್ಳುವದು ಪ್ರತಿಯೊಬ್ಬನ ಕರ್ತವ್ಯ ವಾಗಿದೆ. ಮಹತ್ತರವಾದ ಈ ಕರ್ತವ್ಯವನ್ನು ಪ್ರತಿಯೊಬ್ಬನು ಒಳ್ಳೇ ದಕ್ಷತೆ ಯಿಂದ ಪಾಲಿಸಬೇಕು. ತನ್ನ ಮತದ ಮಹತ್ವವನ್ನು ಪ್ರತಿಯೊಬ್ಬನು ಅರಿತು ಕೊಂಡು ಅದನ್ನು ಸತ್ಪಾತ್ರದಲ್ಲಿಯೇ ವಿನಿಯೋಗಿಸಬೇಕು. "ಹನಿ ಹನಿ ಕೂಡಿದರೆ ಹಳ್ಳ" ಎಂಬ ನಾಣ್ಣುಡಿಯಂತೆ, ಪ್ರತಿಯೊಬ್ಬ ನಾಗರಿಕನು ಯೋಗ್ಯ ಉಮೇದವಾರರಿಗೆ ಮತಕೊಟ್ಟರೆ ಮಾತ್ರ, ಅರ್ಹತೆಯುಳ್ಳ ಜನರೇ ಅಧಿಕಾರದಲ್ಲಿ ಬರುವರು. ನಾನು ಮತಕೊಟ್ಟರೇನು ಕೊಡದಿದ್ದರೇನು, ಯಾರಿಗೆ ಕೊಟ್ಟರೇನು, ನನ್ನ ಒಂದು ಮತದಿಂದ ಏನಾಗುವದಿದೆ ಮುಂತಾದ ಮನೋಭಾವವು ಅಳಿಯಬೇಕು. ಪ್ರತಿಯೊಂದು ಮತಕ್ಕೂ ಅಮೌಲ್ಯವಾದ ಬೆಲೆಯಿದೆ, ಎಂಬುದನ್ನು ಚನ್ನಾಗಿ ಗಮನಿಸಬೇಕು. ಮತ್ತು ಅದರಂತೆ

ಕಾರ್ಯದಲ್ಲಿ ಪ್ರವೃತ್ತರಾಗಬೇಕು. ಎಲ್ಲಿಯವರೆಗೆ ಜನರು ತಮ್ಮ ಮತದಾನದ ಹಕ್ಕನ್ನು ಸರಿಯಾಗಿ ಉಪಯೋಗಿಸಿಕೊಳ್ಳುವದಿಲ್ಲವೋ, ಅಲ್ಲಿಯವರೆಗೆ ಅವರಿಗೆ ಪ್ರಜಾಪ್ರಭುತ್ವದ ಸಿಹಿಫಲಗಳು ದೊರೆಯಲಾರವು. ಆದ್ದರಿಂದ ಪ್ರತಿಯೊಬ್ಬ ಮತದಾರನು ತನ್ನ ಮತದ ಮಹತ್ವವನ್ನೂ ಹಾಗೂ ತನ್ನ ಹೊಣೆಯನ್ನೂ ಸರಿಯಾಗಿ ಅರಿತುಕೊಂಡು ಅದನ್ನು ಸರಿಯಾಗಿ ನೆರವೇರಿಸಲು ಅಣಿಯಾಗಬೇಕು ಅಂದರೆ ಮಾತ್ರ ಪ್ರಜಾಪ್ರಭುತ್ವದ ಸೌಖ್ಯವು ಪ್ರತಿಯೊಬ್ಬನಿಗೂ ಲಭಿಸುವದು.

(ii) ಪರರ ಅಭಿಪ್ರಾಯವನ್ನು ಸಮಂಜಸವಾದ ರೀತಿಯಲ್ಲಿ ಅರಿತುಕೊಂಡು ಅದಕ್ಕೆ ಹೊಂದಿಕೊಂಡು ಹೋಗುವ ಮನೋವೃತ್ತಿಯು ಜನತೆಯಲ್ಲಿ ಇರಬೇಕು.

(iii) ಸಾರ್ವಜನಿಕ ವಿಷಯಗಳನ್ನು ಚನ್ನಾಗಿ ಪರಿಶೀಲಿಸಿ ಅವುಗಳ ಬಗ್ಗೆ ನಿಶ್ಚಿತವಾದ ಧೋರಣೆಯನ್ನು ತಿಳಿಯಲು ಬೇಕಾಗುವ ಜ್ಞಾನ ಜನರಲ್ಲಿರಬೇಕು.

(iv) ಪ್ರತಿಯೊಬ್ಬನು ತನ್ನ ಕರ್ತವ್ಯವನ್ನು ದಕ್ಷತೆಯಿಂದ ಪಾಲಿಸಬೇಕು.

(v) ಬೆನಿ ಪ್ರಸಾದರು ಹೇಳಿದಂತೆ ದೇಶದಲ್ಲಿ ಶಾಂತತೆ, ಜನತೆಯಲ್ಲಿ ಉಚ್ಚಮಟ್ಟದ ಜೀವನಕ್ರಮ ಹಾಗೂ ಶಿಕ್ಷಣ. ಪ್ರಜೆಗಳಲ್ಲಿ ಸಹಿಷ್ಣುತೆ, ಸಹಕಾರ ಬುದ್ಧಿ. ನೈತಿಕದಾರ್ಢ್ಯ, ತಾವೇ ಆಳಬೇಕೆಂಬ ಉತ್ಕಟವಾದ ಇಚ್ಛೆ ಮತ್ತು ಎಲ್ಲಕ್ಕೂ ಹೆಚ್ಚಾಗಿ ಸಮಾಜಸೇವೆ, ಇವೇ ಮೊದಲಾದವುಗಳು ಪ್ರಜಾಪ್ರಭುತ್ವದ ಅಡಿಗಲ್ಲು.

**ಲಾಭಗಳು:—**

(೧) ಪ್ರತಿಯೊಬ್ಬನಿಗೆ ತನ್ನ ಅಭಿಪ್ರಾಯವನ್ನು ವ್ಯಕ್ತಮಾಡಲು ಬರುತ್ತದೆ. ಹೀಗಾಗಿ ಸರಕಾರಕ್ಕೆ ಜನತೆಯ ಬುದ್ಧಿಶಕ್ತಿಯನ್ನು ಉಪಯೋಗಿಸಿಕೊಳ್ಳಲು ಅನುವು ದೊರಕುತ್ತದೆ.

(೨) ಎಲ್ಲ ಪಕ್ಷ ಪಂಗಡಗಳ ಹಿತಾಹಿತಗಳು ಲಕ್ಷಿಸಲ್ಪಡುತ್ತವೆ. ಅಲ್ಪಸಂಖ್ಯಾಕರ ಅಭಿಪ್ರಾಯಕ್ಕೂ ಮತ್ತು ಅವರ ಬೇಡಿಕೆಗಳಿಗೂ ಮಾನ್ಯತೆಯು ದೊರಕುತ ದೆ.

(೩) ಸರಕಾರವು ಹೆಚ್ಚು ಶಕ್ತಿಯುತವಾಗುತ್ತದೆ. ಸರಕಾರದ ಕಣ್ಣು ತಪ್ಪಿಸಲು ಭಾವನೆಯು ಅಳಿದು ಸಮಾಜದ ಹಿತಕ್ಕಾಗಿ ಸರಕಾರದ ಸದುಪಯೋಗ ಮಾಡಿಕೊಳ್ಳಲಾಗುತ್ತದೆ.

(೪) ಅಸ್ತಿತ್ವದಲ್ಲಿದ್ದ ಸರಕಾರವು ಅಷ್ಟೊಂದು ಸಮಾಧಾನಕರವಾಗಿ ಕೆಲಸ ಮಾಡದಿದ್ದಲ್ಲಿ ಅದನ್ನು ಸಹಜವಾಗಿ ಉರುಳಿಸಲು ಬರುತ್ತದೆ.

(೫) ಇದಕ್ಕೆ ಬಹಳ ಶೈಕ್ಷಣಿಕ ಮಹತ್ವವಿದೆ. ವಿವಿಧ ಪಕ್ಷಪಂಗಡಗಳು ತಮ್ಮ ಧೋರಣೆಯನ್ನು ಜನತೆಯ ಮುಂದೆ ಇಡುತ್ತವೆ. ನಾಗರಿಕನಿಗೆ ಅವೆಲ್ಲವುಗಳ ಬಗ್ಗೆ ಜ್ಞಾನವಾಗಿ ಅವನಲ್ಲಿ ರಾಜಕೀಯ ಜಾಗ್ರತೆಯುಂಟಾಗುತ್ತದೆ.

(೬) ಪ್ರತಿಯೊಬ್ಬ ನಾಗರಿಕನು ರಾಜ್ಯದ ಆಡಳಿತೆಯಲ್ಲಿ ಭಾಗವಹಿಸುವದರಿಂದ ಅವನಲ್ಲಿ ದೇಶಾಭಿಮಾನವು ಬೆಳೆಯುತ್ತದೆ.

(೭) ಇದು ನಾಗರಿಕತೆಯ ಸದ್ಗುಣಗಳಿಗೆ ಪೋಷಕವಾಗಿರುತ್ತದೆ. ಸಹಕಾರ, ಸಹಾನುಭೂತಿ, ಸಹಿಷ್ಣುತೆ, ಪ್ರೀತಿ, ಸೇವಾಬುದ್ಧಿ, ತ್ಯಾಗಬುದ್ಧಿ ಮುಂತಾದ ಸದ್ಗುಣಗಳನ್ನು ನಾಗರಿಕರಲ್ಲಿ ಹೆಚ್ಚಿಸುತ್ತದೆ.

(೮) ದೊಡ್ಡ ಹಿತಸಾಧನೆಗಾಗಿ ಸಣ್ಣ ಹಿತಗಳನ್ನು ಬದಿಗಿರಿಸಲು ಕಲಿಸುತ್ತದೆ.

**ಹಾನಿಗಳು:—**

(೧) ಎಲ್ಲ ಮನುಷ್ಯರೂ ಸಮಾನರಿರುವದಿಲ್ಲ. ಬೌದ್ಧಿಕ ಮತ್ತು ಶಾರೀರಿಕ ವಿಷಯಗಳಲ್ಲಿ ಅವರು ಭಿನ್ನರಾಗಿರುತ್ತಾರೆ. ಹೀಗಾಗಿ ಸಮಾನತೆಯ ತಳಹದಿಯಮೇಲೆ ನಿಂತ ಪ್ರಜಾಪ್ರಭುತ್ವವು ಅಸಮಂಜಸವಾದುದು.

(೨) ಪ್ರಜಾಪ್ರಭುತ್ವವೆಂದರೆ ಸಾಮಾನ್ಯ ಮನುಷ್ಯನ ಆಳಿಕೆ. ಆದರೆ ಸಾಮಾನ್ಯ ಮನುಷ್ಯನಿಗೆ ಸರಕಾರದ ಮಹತ್ವದ ಪ್ರಶ್ನೆಗಳ ಬಗ್ಗೆ ವಿಚಾರ ಮಾಡಲು ಮತ್ತು ನಿಶ್ಚಿತವಾದ ಧೋರಣೆಯನ್ನು ಕೈಕೊಳ್ಳಲು ಬೇಕಾಗುವ ಬುದ್ಧಿ ಶಕ್ತಿ ಇರುವದಿಲ್ಲ.

(೩) ದೇಶಸಂರಕ್ಷಣೆ ಮತ್ತು ಪರರಾಷ್ಟ್ರಧೋರಣೆ ಇವುಗಳ ವಿಷಯದಲ್ಲಿ ಅವಸರದ ನಿರ್ಣಯವನ್ನು ಕೈಕೊಳ್ಳಲು ಪ್ರಜಾಪ್ರಭುತ್ವವು ಅಸಮರ್ಥವಿರುತದೆ.

(೫) ಇದರಲ್ಲಿ ಅರ್ಹತೆಗಿಂತ ಸಂಖ್ಯೆಗೆ ಹೆಚ್ಚು ಮಹತ್ವ ಕೊಡಲಾಗುತ್ತದೆ. ಆದ್ದರಿಂದ ಇದು ಮೂರ್ಖರ ರಾಜ್ಯ, ಅಜ್ಞಾನಿಗಳ ರಾಜ್ಯ ಎಂದು ಉಗ್ರವಾದಿಗಳು ಅಭಿಪ್ರಾಯ ಪಟ್ಟಿದ್ದಾರೆ. ಮಹಾನುಭಾವರ ಅಭಿಪ್ರಾಯಕ್ಕೂ ಜನಸಾಮಾನ್ಯರ ಮತ್ತು ತಿಳಿಗೇಡಿಗಳ ಅಭಿಪ್ರಾಯಕ್ಕೂ ಅಷ್ಟೇ ಬೆಲೆಯನ್ನು ಕೊಡುವದು ಹಾಸ್ಯಾಸ್ಪದವು.

(೬) ಚುನಾವಣೆಯ ಕಾಲದಲ್ಲಿ ಭಾವೋದ್ರೇಕಗೊಳಿಸುವ ಭಾಷಣಗಳಿಂದ ಪ್ರೇರಿತರಾಗಿ ಜನರು ಅಯೋಗ್ಯರಾದವರಿಗೆ ಮತಕೊಡುವ ಸಂಭವವೇ ಹೆಚ್ಚು.

(೭) ಇದಕ್ಕೂ ಹೆಚ್ಚಾಗಿ ಎಷ್ಟೋ ಹುರಿಯಾಳುಗಳು ಜನರಿಗೆ ಹಣದ ಆಸೆ ತೋರಿಸಿ ತಾವು ಮತಗಳನ್ನು ಪಡೆದುಕೊಂಡು ಆರಿಸಿ ಬರುತ್ತಾರೆ. ಇಂಥವರು ನಿಜವಾಗಿ ಜನರ ಪ್ರತಿನಿಧಿಗಳು ಆಗಲಾರರು.

(೮) ಪಕ್ಷ ಸಂಗಡಗಳ ಎಲ್ಲ ಅನಿಷ್ಟಗಳು ಇದರಲ್ಲಿ ತಲೆಯೆತ್ತಿ ನಿಲ್ಲುತ್ತವೆ.

ಮೇಲೆ ವಿವರಿಸಿದ ಸರಕಾರದ ವರ್ಗೀಕರಣವು ಆಧುನಿಕ ಯುಗಕ್ಕೆ ಅಷ್ಟೊಂದು ಸರಿಯಾಗಿ ಅನ್ವಯಿಸುವದಿಲ್ಲ. ಏಕೆಂದರೆ ಕಾಲಮಾನ ಪರಿಸ್ಥಿತಿಯು ಬಹಳೇ ಬದಲಾಗಿದೆ, ಹಿಂದಿನ ನಗರದೇಶಗಳು ಕ್ಷೇತ್ರದಲ್ಲಿ ಬೆಳೆದು ಈಗ ರಾಷ್ಟ್ರಗಳಾಗಿವೆ. ಇಂದಿನ ರಾಷ್ಟ್ರದ ಎದುರಿಗೆ ಅನೇಕ ಬಗೆಯ ಗಡುಚಾದ ಸಮಸ್ಯೆಗಳು ತಲೆದೋರಿವೆ. ಮೇಲಾಗಿ ರಾಜ್ಯಸೂತ್ರಗಳನ್ನು ವಹಿಸಿದವರ ಸಂಖ್ಯೆಯ ಮೇರೆಗೆ ಸರಕಾರವನ್ನು ವಿಭಾಗಿಸುವದು ಸಮಂಜಸವಾಗುದಲ್ಲವೆಂದು ಎಲ್ಲರ ಅಭಿಪ್ರಾಯ.

ಆಧುನಿಕ ಸರಕಾರಗಳನ್ನು ನಿರಂಕುಶಪ್ರಭುತ್ವ (Autocracy) ಮತ್ತು ಜನತಾ ಸರಕಾರ (Popular Government) ಎಂದು ವಿಭಾಗಿಸಬಹುದು. ಸರ್ವಾಧಿಕಾರ ಪ್ರಭುತ್ವ ಪದ್ಧತಿಯು ನಿರಂಕುಶ ಪ್ರಭುತ್ವ ಪದ್ಧತಿಯಲ್ಲಿಯೇ ಸಮಾವೇಶವಾಗುತ್ತದೆ. ಜನತಾ ಸರಕಾರದಲ್ಲಿ ಜೊತೆಗಾರ ಅಥವಾ ಪಾರ್ಲಿಮೆಂಟರಿ ಅಥವಾ ಸಚಿವಾಯತ್ತ (Cabinet) ಸರಕಾರ ಮತ್ತು ಅಧ್ಯಕ್ಷೀಯ (Presidential) ಸರಕಾರ ಎಂಬ ಅವಾಂತರ ಭೇದಗಳಿವೆ. ಇದಲ್ಲದೆ ಸರಕಾರಗಳನ್ನು ಏಕೀಕೃತ (Unitary) ಹಾಗೂ

ಸಂಯುಕ್ತ (Federal) ಸರಕಾರಗಳೆಂದು ವಿಭಾಗಿಸಬಹುದು. ಇಲ್ಲವೆ ಅಧಿಕಾರಿ ವರ್ಗಗಳ ಸರಕಾರ (Bureaucratic) ಮತ್ತು ಲೋಕಪ್ರಿಯ (Popular) ಸರಕಾರ ಎಂದು ವಿಭಾಗಿಸಬಹುದು.

**ಸರ್ವಾಧಿಕಾರತ್ವ (Dictatorship)**

ಯಾವದಾದರೊಂದು ವ್ಯಕ್ತಿ ರಾಜಸೂತ್ರಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡು ತನ್ನ ಮನಬಂದಂತೆ ರಾಜ್ಯದಾಡಳಿತೆಯನ್ನು ನಡೆಸುವ ಪದ್ಧತಿಗೆ ಸರ್ವಾಧಿಕಾರಿ ಪದ್ಧತಿ ಎನ್ನುವರು. ಈ ಸರ್ವಾಧಿಕಾರಿಯು ತನ್ನ ಬಾಹುಬಲದಿಂದ ಇತರರನ್ನು ಸದೆಬಡಿದು ಅಧಿಕಾರವನ್ನು ಪಡೆದಿರಬಹುದು. ಇಲ್ಲವೆ ಕೆಲವೊಂದು ಸಲ ಜನರೇ ತಮ್ಮಲ್ಲಿಯ ಒಬ್ಬನನ್ನು ಆರಿಸಿ ಆತನ ಮುಖಂಡತ್ವವನ್ನು ಒಪ್ಪಿಕೊಂಡು ಆತನ ಹೇಳಿಕೆಯಂತೆ ವರ್ತಿಸುತ್ತಾರೆ. ಆತನೇ ಪರಮದೇವತೆಯೆಂದು ಆರಾಧಿಸುತ್ತಾರೆ. ಈ ಪದ್ಧತಿಯಲ್ಲಿ ವ್ಯಕ್ತಿಯ ಮತ್ತು ಜನತೆಯ ಅಭಿಪ್ರಾಯಕ್ಕೆ ಮನ್ನಣೆಯಿಲ್ಲ. ಸರ್ವಾಧಿಕಾರಿಯು ಅಂದದ್ದೇ ವೇದವಾಕ್ಯ ಮಾಡಿದ್ದೇ ಪ್ರಮಾಣ. ಎಲ್ಲರೂ ಆತನ ಆಜ್ಞೆಯನ್ನು ಶಿರಸಾ ಮನ್ನಿಸಿ ಅದರಂತೆ ವರ್ತಿಸಲೇಬೇಕು.

**ಲಾಭಗಳು:—**

(೧) ಈ ಪದ್ಧತಿಯಲ್ಲಿ ಸರಕಾರದ ಕೆಲಸಗಳು ಒಳ್ಳೇ ಅಚ್ಚುಕಟ್ಟುತನದಿಂದ ಸಾಗುತ್ತವೆ. ಯುದ್ಧಸಿದ್ಧತೆ ಹಾಗೂ ಯುದ್ಧನಿರ್ವಹಣ ಮುಂತಾದ ಸಮಸ್ಯೆಗಳನ್ನು ಇತರ ಎಲ್ಲ ಸರಕಾರಗಳಿಗಿಂತ ಸರ್ವಾಧಿಕಾರ ಸರ್ಕಾರವೇ ಹೆಚ್ಚು ಚೆನ್ನಾಗಿ ಎದುರಿಸಬಲ್ಲದು.

(೨) ಸರ್ವಾಧಿಕಾರಿಯು ತನ್ನ ದೇಶವನ್ನು ಇತರ ದೇಶಗಳಿಗಿಂತ ಮುಂದೆ ತರಲು ಹಗಲಿರುಳೂ ಹೆಣಗುವನು. ಇದಕ್ಕೆ ಹಿಟ್ಲರ, ಮುಸಲೋನಿ ಕಮಾಲಪಾಶಾ ಇವರೇ ಉದಾಹರಣೆ.

(೩) ಯುದ್ಧೋತ್ತರ ತಲೆದೋರುವ ನಿರುದ್ಯೋಗ, ಆರ್ಥಿಕ ಮುಗ್ಗಟ್ಟು, ಇವುಗಳನ್ನು ಸರ್ವಾಧಿಕಾರಿಗಳೇ ಸಮಾಧಾನಕರವಾಗಿ ಎದುರಿಸಬಲ್ಲರು. ೧೯೧೪–೧೮ ರಲ್ಲಾದ ಮಹಾಯುದ್ಧದ ತರುವಾಯ ಜರ್ಮನಿಯಲ್ಲಿ ಉದ್ಭವಿಸಿದ ನಿರುದ್ಯೋಗ, ಆರ್ಥಿಕ ದುರ್ದೆಶೆ, ಮುಂತಾದವುಗಳನ್ನು ಜನತಾ ಸರಕಾರಗಳು ಎದುರಿಸಲಾರದೆ ತತ್ತರಿಸಿದ್ದವು. ಅಂತಹ ವಿಷಮ

ಪರಿಸ್ಥಿತಿಯಲ್ಲಿ ಹಿಟ್ಲರನು ಸರ್ವಾಧಿಕಾರಿಯಾದ ಮೇಲೆ ತನ್ನ ರಾಷ್ಟ್ರೋದ್ಧಾರಕ ಮಾರ್ಗವನ್ನು ಕಂಡುಹಿಡಿದು ಜಗತ್ತಿನಲ್ಲೆಲ್ಲ ಜರ್ಮನಿಗೆ ಉಚ್ಚಸ್ಥಾನವನ್ನು ಕಲ್ಪಿಸಿಕೊಟ್ಟನು.

(೪) ಸರ್ವಾಧಿಕಾರಿಯು ರಾಷ್ಟ್ರಹಿತೈಷಿಯೂ, ಕುಶಾಗ್ರಬುದ್ಧಿಯುಳ್ಳವನೂ ಆಗಿದ್ದರೆ ತನ್ನ ರಾಷ್ಟ್ರದ ಏಳ್ಗೆಗಾಗಿ ಸಿದ್ಧ ಪಡಿಸಿದ ಯೋಜನೆಗಳನ್ನು ವಿಲಂಬವಿಲ್ಲದೆ ಕಾರ್ಯರೂಪಕ್ಕೆ ತರಲು ಶಕ್ತನಿರುತ್ತಾನೆ.

**ಹಾನಿಗಳು:—**

(೧) ನಾಗರಿಕನ ಸಾಮಾಜಿಕ, ರಾಜಕೀಯ ಹಾಗೂ ನೈತಿಕ ಸ್ವಾತಂತ್ರ್ಯಕ್ಕೆ ಈ ಪದ್ಧತಿಯು ವಿಘಾತಕವಾಗಿದೆ. ಸರ್ವಾಧಿಕಾರಿಗಳು ತಮ್ಮ ವಿರುದ್ಧವಾಗಿ ಯಾರಾದರೂ ವರ್ತಿಸಿದಲ್ಲಿ ಅವರನ್ನು ಹತ್ತಿಕ್ಕಿ ಆ ವಿರೋಧಾಭಿಪ್ರಾಯವನ್ನೇ ನಿರ್ಮೂಲನಗೊಳಿಸಿ ತಮ್ಮ ಅಧಿಕಾರವನ್ನೇ ಪ್ರಸ್ಥಾಪಿಸುತ್ತಾರೆ.

(೨) ಸರಕಾರದ ಕೃತಿಗಳ ವಿಮರ್ಶೆ ಹಾಗೂ ಅದರ ಟೀಕೆಗಳನ್ನು ನಿರ್ದಯೆಯಿಂದ ಹತ್ತಿಕ್ಕಲಾಗುವದು. ಸರ್ವಾಧಿಕಾರಿಗಳು ತಾವು ಕೈಕೊಂಡ ಧೋರಣೆಯೇ ಉಚಿತವಾದುದೆಂದು ಅಲ್ಲದ ಸಲ್ಲದ ಯುಕ್ತಿವಾದಗಳಿಂದ ಪ್ರತಿಪಾದಿಸುತ್ತಾರೆ. ಹೀಗಾಗಿ ಜನತೆಯ ಬಾಯಿಗೆ ಬೀಗ ಹಾಕಿದಂತಾಗುತ್ತದೆ.

(೩) ಸರ್ವಾಧಿಕಾರಿಗೆ ಜನತೆಯ ಬೇಡಿಕೆಗಳನ್ನು ಅರಿತುಕೊಳ್ಳಲು ಮತ್ತು ಅವನ್ನು ಪೂರೈಸಲು ಸಾಧ್ಯವಾಗುವದಿಲ್ಲ. ಸರ್ವಾಧಿಕಾರಿಯು ಪ್ರಾಮಾಣಿಕನಿರಬಹುದು. ನಿಃಸ್ವಾರ್ಥಿ ಇರಬಹುದು; ಮತ್ತು ಯೋಗ್ಯನೂ ಇರಬಹುದು. ಆದರೆ ಅವನು ಸರ್ವಾಧಿಕಾರವನ್ನು ವಹಿಸಿದ ಮೇಲೆ ಈ ಎಲ್ಲ ಗುಣಗಳು ಅಳಿದು ಹೋಗುವ ಸಂಭವವೇ ಹೆಚ್ಚು. ನಿರ್ಭಯವಾದ ಮತ್ತು ನಿರ್ದಾಕ್ಷಿಣ್ಯವಾದ ಸಾರ್ವಜನಿಕ ಟೀಕೆಗೆ ಅಸ್ಪದವೇ ಇಲ್ಲದಿರುವದರಿಂದ ರಾಜ್ಯಪದ್ಧತಿಯಲ್ಲಿ ಎಲ್ಲ ಬಗೆಯ ಅನಿಷ್ಟಗಳು ತಲೆ ಎತ್ತುತ್ತವೆ.

(೪) ಒಬ್ಬ ಸರ್ವಾಧಿಕಾರಿಯು ಯೋಗ್ಯನಿದ್ದು ಜನರ ಮನ್ನಣೆಗೆ ಪಾತ್ರನಾಗಿರಬಹುದು. ತನ್ನ ದೇಶವನ್ನು ಮುಂದುವರಿಸಬಹುದು. ಆದರೆ

ಆತನ ನಂತರ ಬರುವ ಸರ್ವಾಧಿಕಾರಿಯು ಅವನಂತೆಯೇ ಯೋಗ್ಯನಿರುವ ನೆಂಬ ಬಗ್ಗೆ ಯಾವ ಭರವಸೆಯೂ ಇಲ್ಲ.

**ಹೊಣೆಗಾರ ಸರಕಾರ** (Responsible Government)

ಜನರ ಪ್ರತಿನಿಧಿಗಳಿಂದ ನಡೆಯಿಸಲ್ಪಟ್ಟ ಸರಕಾರಕ್ಕೆ ಹೊಣೆಗಾರ ಸರಕಾರ ಎಂದು ಕರೆಯುವರು. ಇದರಲ್ಲಿ ಜನರ ಆಶೆ ಆಕಾಂಕ್ಷೆಗಳು ಸಂಪೂರ್ಣವಾಗಿ ಈಡೇರುತ್ತವೆ. ರಾಜ್ಯದಾಡಳಿತೆಯಲ್ಲಿ ಪ್ರಜೆಗಳ ಅಭಿಪ್ರಾಯಕ್ಕೆ ಮನ್ನಣೆ ದೊರೆಯುತ್ತದೆ. ಇದರ ವೈಶಿಷ್ಟ್ಯಗಳು ಕೆಳಗಿನಂತಿವೆ.

(೧) ಕಾರ್ಯಕಾರೀ ಮಂಡಲವು ಸಂಪೂರ್ಣವಾಗಿ ಶಾಸನ ಮಂಡಲಗಳ ಸದಸ್ಯರಿಗೆ ಹೊಣೆಗಾರವಿರುತ್ತದೆ. ಮತ್ತು ಅದನ್ನು ಅವಲಂಬಿಸಿರುತ್ತದೆ. ಕಾರ್ಯಕಾರೀ ಶಾಖೆಯ ಮುಖ್ಯರಾದ ಮಂತ್ರಿಗಳ ಪಗಾರವು ಶಾಸನ ಮಂಡಲಗಳಿಂದಲೇ ನಿರ್ಣಯಿಸಲ್ಪಡುತ್ತದೆ. ಎರಡೂ ಶಾಖೆಗಳು ಒಮ್ಮನಿಸ್ಸಿನಿಂದಃಕಾರ್ಯಮಾಡಬೇಕು. ಮತಭೇದವಾದಲ್ಲಿ ಮಂತ್ರಿಗಳೇ ರಾಜೀನಾಮೆ ಕೊಡಬೇಕಾಗುವದು. ಶಾಸನಮಂಡಲಕ್ಕೆ ಇವರಲ್ಲಿ ವಿಶ್ವಾಸವಿರುವವರೆಗೆ ಮಾತ್ರ ಇವರು ( ಮಂತ್ರಿಗಳು ) ಅಧಿಕಾರದಲ್ಲಿರಬಲ್ಲರು. ಸಂಕ್ಷಿಪ್ತದಲ್ಲಿ ಹೇಳುವದಾದರೆ ಕಾಯ್ದೆ ವಿಧಾಯಕ ಮಂಡಲವು ಕಾರ್ಯಕಾರೀ ಶಾಖೆಯನ್ನು ಸಂಪೂರ್ಣವಾಗಿ ತನ್ನ ಅಂಕಿತದಲ್ಲಿಟ್ಟುಕೊಂಡಿರುತ್ತದೆ.

(೨) ಕಾಯದೆ ವಿಧಾಯಕ ಶಾಖೆಯು ನಿಜವಾಗಿಯೂ ಜನರ ಪ್ರತಿನಿಧಿಯಾಗಿರಬೇಕು ತಮ್ಮ ಪ್ರತಿನಿಧಿಗಳನ್ನು ಆರಿಸಿಕೊಡುವ ಮತದಾನಾಧಿಕಾರವು ಪ್ರಜೆಗಳಿಗೆ ಇರುತ್ತದೆ. ಶಾಸನಮಂಡಲವು ಜನತೆಯ ಅಭಿಪ್ರಾಯವನ್ನು ವ್ಯಕ್ತಗೊಳಿಸುವಂತಹದಿರಬೇಕು.

(೩) ಕಾರ್ಯಕಾರೀ ಮತ್ತು ಕಾಯ್ದೆವಿಧಾಯಕ ಶಾಖೆಗಳ ಸುಂದರವಾದ ಮಿಲನವಿರಬೇಕು.

**ಉದಾ:—** ಮಂತ್ರಿಮಂಡಲದಲ್ಲಿ ಮುಖ್ಯ ಮಂತ್ರಿಯು ಶಾಸನ ಮಂಡಲದೊಳಗಿನ ಬಹುಮತ ಪಕ್ಷದ ಮುಖಂಡನಾಗಿದ್ದು ಇತರ ಮಂತ್ರಿಗಳಿಗೆ ಬೇರೆ ಬೇರೆ ಖಾತೆಗಳನ್ನು ಒಪ್ಪಿಸುತ್ತಾನೆ. ಈ ಎಲ್ಲ ಮಂತ್ರಿಗಳು ಶಾಸನ ಮಂಡಲದ ಸದಸ್ಯರಿರುವರು. ಇವರೇ ಮಹತ್ವದ ಮಸೂದೆಗಳನ್ನು

ಸಿದ್ಧಗೊಳಿಸಿ ಶಾಸನ ಮಂಡಲಗಳಲ್ಲಿ ಪಾಸುಮಾಡಿಸುತ್ತಾರೆ. ಈ ರೀತಿ ಯಾಗಿ ಎರಡೂ ಶಾಖೆಗಳ ಸುಂದರವಾದ ಮಿಲನವಾಗುತ್ತದೆ.

(೪) ಮಂತ್ರಿಮಂಡಲವು ಸಾಮೂಹಿಕ ಹೊಣೆಗಾರಿಕೆಯ ತತ್ವದ ಮೇಲೆ ಕೆಲಸಮಾಡುತ್ತದೆ. ಮಂತ್ರಿಗಳು ಕೂಡಿಯೇ ಅಧಿಕಾರದಲ್ಲಿ ಬರುತ್ತಾರೆ. ಮತ್ತು ಕೂಡಿಯೇ ಅಧಿಕಾರ ಬಿಟ್ಟು ಹೋಗುತ್ತಾರೆ. ಎಲ್ಲರೂ ಪ್ರತಿಯೊಬ್ಬನ ಕೆಲಸಕ್ಕೆ ಹೊಣೆಗಾರರು. ಮತ್ತು ಪ್ರತಿಯೊಬ್ಬನು ಎಲ್ಲರ ಕೆಲಸಕ್ಕೆ ಹೊಣೆಗಾರನು.

(೫) ಅರಸನು (ಅಥವಾ ಗವ್ಹರ್ನರಜನರಲ್‌ನು ಇಲ್ಲವೆ ಗವ್ಹರ್ನರನು) ರಾಜಕೀಯ ವಿಷಯಗಳಲ್ಲಿ ತನ್ನ ಮಂತ್ರಿಗಳ ಸಲಹೆಯಂತೆ ವರ್ತಿಸುತ್ತಾನೆ.

## ಅಧ್ಯಕ್ಷೀಯ ಸರಕಾರ (Presidential Government)

ಈ ಪದ್ಧತಿಯಲ್ಲಿ ಜನರೇ ಅಧ್ಯಕ್ಷನನ್ನು ಚುನಾವಣೆಯಿಂದ ಆರಿಸಿ ಅವನನ್ನು ಕಾರ್ಯಕಾರೀ ಶಾಖೆಯ ಮುಖ್ಯಸ್ಥನನ್ನಾಗಿ ಮಾಡುತ್ತಾರೆ. ಆತನ ಅವಧಿಯು ಇಂತಿಷ್ಟೇ ಎಂದು ನಿರ್ದಿಷ್ಟವಾಗುತ್ತದೆ. (ಸಾಮಾನ್ಯವಾಗಿ ೫ ವರುಷ) ಇವನು ಶಾಸನ ಮಂಡಲಗಳಿಗೆ ಹೊಣೆಗಾರನಿರುವದಿಲ್ಲ. ಅವು ಇವನಿಗೆ ಆಡಳಿತೆಯ ವಿಷಯದಲ್ಲಿ ಕೊಟ್ಟ ಸಲಹೆಗಳು ಇವನಿಗೆ ಬಂಧನಕಾರವಾಗಿರುವದಿಲ್ಲ. ಕಾರ್ಯಕಾರೀ ಶಾಖೆಯಲ್ಲಿ ತನಗೆ ಸಹಾಯ ಮಾಡಲು ಮಂತ್ರಿಗಳನ್ನು ಇಲ್ಲವೆ ಕಾರ್ಯದರ್ಶಿಗಳನ್ನು ನಿಯಮಿಸುತ್ತಾನೆ. ಇವರು ಶಾಸನ ಮಂಡಲಗಳ ಸದಸ್ಯರಿರುವದಿಲ್ಲ. ಇವರು ಅಧ್ಯಕ್ಷನಿಗೆ ಮಾತ್ರ ಹೊಣೆಗಾರರು. ಕಾರ್ಯಕಾರೀ ಶಾಖೆಯು ಕಾಯ್ದೆ ವಿಧಾಯಕ ಶಾಖೆಗೆ ಅಧೀನವಾಗಿರದೆ ಅದರ ಸಂಸಮಾನವಾಗಿರುವದೇ ಈ ಪದ್ಧತಿಯ ಜೀವಾಳ. ಕಾರ್ಯಕಾರೀ ಶಾಖೆ ಮತ್ತು ಕಾಯ್ದೆ ವಿಧಾಯಕಶಾಖೆ ಇವುಗಳಲ್ಲಿ ಉಂಟಾದ ಮತಭೇದಗಳನ್ನು ನ್ಯಾಯಶಾಖೆಯು ಬಗೆಹರಿಸುತ್ತದೆ.

### ಲಾಭಗಳು:—

(೧) ಕಾರ್ಯಕಾರೀ ಶಾಖೆಯು ಕಾಯ್ದೆ ವಿಧಾಯಕ ಶಾಖೆಗೆ ಅಧೀನವಿಲ್ಲದಿರುವದರಿಂದ ಸರಕಾರದ ಕೆಲಸಗಳನ್ನು ನೆರವೇರಿಸಲು ಬಹಳೇ

ಅನುಕೂಲವಾಗುತ್ತದೆ. ಒಂದು ನಿಶ್ಚಿತ ಧೋರಣೆಯನ್ನು ವಹಿಸಿ ಅದನ್ನು ಕಾರ್ಯರೂಪಕ್ಕೆ ತರಲು ಕಾರ್ಯಕಾರೀ ಶಾಖೆಗೆ ಸಾಧ್ಯವಾಗುತ್ತದೆ.

(೨) ಕಾರ್ಯಕಾರೀ ಶಾಖೆಯ ಹೊಣೆಯು ಹೆಚ್ಚಾಗುತ್ತದೆ. ಮತ್ತು ಅದು ಹೆಚ್ಚು ಶಕ್ತಿಯುತವಾಗುತ್ತದೆ. ವಿಲಂಬವಿಲ್ಲದೆ ಕಾರ್ಯ ಸಾಗಿಸಲು ಅನುಕೂಲವಾಗುತ್ತದೆ.

(೩) ಪಕ್ಷಪಂಗಡಗಳು ಪ್ರಬಲವಿರುವ ರಾಷ್ಟ್ರದಲ್ಲಿ ಈ ಪದ್ಧತಿಯು ಹೆಚ್ಚು ಫಲದಾಯಕವಾಗಿರುತ್ತದೆ.

**ಹಾನಿಗಳು:—**

(೧) ಕಾರ್ಯಕಾರೀ ಮತ್ತು ಶಾಸ್ತ್ರವಿಧಾಯಕ ಶಾಖೆಗಳಲ್ಲಿ ಮೇಲಿಂದ ಮೇಲೆ ಘರ್ಷಣೆಗಳುಂಟಾಗಿರುವ ಸಂಭವವಿರುತ್ತದೆ. ಇವೆರಡರ ನಡುವೆ ಸಹಕಾರ ವಿಲ್ಲದಂತಾಗಿ ಎರಡೂ ಪರಸ್ಪರ ವಿರುದ್ಧ ದಿಶೆಯಲ್ಲಿ ಕೆಲಸ ಸಾಗಿಸಿದರೆ ಸರಕಾರದ ಕೆಲಸವು ಸುಸೂತ್ರವಾಗಿ ಸಾಗಲಾರದು.

(೨) ಅಧ್ಯಕ್ಷನು ಒಮ್ಮೆ ಅಧಿಕಾರಕ್ಕೆ ಬಂದ ಮೇಲೆ ಅವನಿಗೆ ತನ್ನ ಮನಸ್ಸಿಗೆ ಬಂದಂತೆ ವರ್ತಿಸಲು ಬರುತ್ತದೆ. ಆತನ ಮೇಲೆ ಯಾವ ನಿಯಂತ್ರಣವೂ ಉಳಿಯುವದಿಲ್ಲ.

(೩) ಅಧ್ಯಕ್ಷನ ಅವಧಿ ಬಹಳೇ ಮರ್ಯಾದಿತವಾಗಿರುವದರಿಂದ ಆ ಅಲ್ಪ ಅವಧಿಯಲ್ಲಿ ತನ್ನ ಧೋರಣೆಯಂತೆ ಕಾರ್ಯಮಾಡಲು ಅವನಿಗೆ ಸಾಧ್ಯವಾಗುವದಿಲ್ಲ. ಮೇಲಾಗಿ ಅವನ ತರುವಾಯ ಅಧಿಕಾರದಲ್ಲಿ ಬಂದ ಅಧ್ಯಕ್ಷನು ಹಿಂದಿನವನು ಕೈಕೊಂಡ ಧೋರಣೆಯನ್ನು ಬದಲಾಯಿಸಿ ಅದರ ವಿರುದ್ಧ ದಿಶೆಯಲ್ಲಿ ಕೆಲಸಮಾಡಬಹುದು.

**ಏಕೀಕೃತ ಸರಕಾರ (Unitary Government)**

ಈ ಪದ್ಧತಿಯಲ್ಲಿ ಕೇಂದ್ರ, ಪ್ರಾಂತಿಕ, ಮತ್ತು ಸ್ಥಾನಿಕ ಸರಕಾರಗಳಲ್ಲಿ ಅಧಿಕಾರವಿತರಣೆಯಾಗಿರದೆ ಎಲ್ಲ ಅಧಿಕಾರಗಳು ಕೇಂದ್ರದಲ್ಲಿಯೇ ಕೇಂದ್ರೀಕರಿಸಲ್ಪಟ್ಟಿರುತ್ತವೆ. ಕೇಂದ್ರ ಸರಕಾರವೇ ತನ್ನಿಷ್ಟದಂತೆ ಕೆಲವು ಅಧಿಕಾರಗಳನ್ನು ಪ್ರಾಂತಿಕ ಇಲ್ಲವೆ ಸ್ಥಾನಿಕ ಸರಕಾರಗಳಿಗೆ ಕೊಡುತ್ತದೆ. ಒಮ್ಮೆ ಕೊಟ್ಟ ಅಧಿಕಾರವನ್ನು ಹೆಚ್ಚಿಸಬಹುದು ಇಲ್ಲವೆ ಕಡಿಮೆ ಮಾಡಬಹುದು. ಹೀಗಾಗಿ ಪ್ರಾಂತಿಕ ಸರಕಾರಗಳು ಕೇಂದ್ರಸರಕಾರದ ಅಧೀನವಿರುತ್ತವೆ.

ಹಿಂದುಸ್ತಾನದಲ್ಲಿ ೧೯೩೫ ನೇ ಇಸ್ವಿಯ ಕಾಯ್ದೆಯು ಜಾರಿಯಲ್ಲಿ ಬರುವ ಪೂರ್ವದಲ್ಲಿ ಈ ಪದ್ಧತಿಯು ಅಸ್ತಿತ್ವದಲ್ಲಿ ಇತ್ತು.

ಲಾಭಗಳು:—

(೧) ಎಲ್ಲ ಅಧಿಕಾರಗಳು ಒಂದೇ ಕಡೆಯಲ್ಲಿ ಕೇಂದ್ರೀಕೃತವಾಗುವದರಿಂದ ಸರಕಾರವು ತನ್ನ ಕೆಲಸವನ್ನು ಸುಸೂತ್ರವಾಗಿ ಮಾಡಲು ಸಮರ್ಥವಾಗುತ್ತದೆ. ಹಣದ ಉಳಿತಾಯವಾಗುತ್ತದೆ. ಮತ್ತು ಕೆಲಸಗಳು ತ್ವರೆಯಿಂದ ಮಾಡಲ್ಪಡುತ್ತವೆ. ಎಲ್ಲಕ್ಕೂ ಮುಖ್ಯವಾಗಿ ಸರಕಾರದ ವರ್ಚಸ್ಸು ಬೆಳೆಯುತ್ತದೆ.

(೨) ದೇಶದ ಎಲ್ಲ ಭಾಗಗಳಲ್ಲಿಯೂ ಒಂದೇ ಬಗೆಯ ಕಾನೂನುಗಳಿರುವುದರಿಂದ ಜನರಲ್ಲಿ ಐಕ್ಯಭಾವನೆಯು ಬೆಳೆಯುತ್ತದೆ.

(೩) ಕೇಂದ್ರಸರಕಾರ ಮತ್ತು ಪ್ರಾಂತಿಕ ಸರಕಾರಗಳಲ್ಲಿ ಅಧಿಕಾರ ವಿಷಯದ ಬಗ್ಗೆ ಘರ್ಷಣೆಯುಂಟಾಗುವದಿಲ್ಲ.

ಹಾನಿಗಳು:—

(೧) ದೇಶದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಬಗೆಯ ಸಮಸ್ಯೆಗಳು ಇರುತ್ತವೆ. ದೇಶದ ಒಂದು ಭಾಗದಲ್ಲಿದ್ದ ಕೇಂದ್ರ ಸರಕಾರಕ್ಕೆ ಈ ಎಲ್ಲ ಸಮಸ್ಯೆಗಳನ್ನು ಸಮಾಧಾನಕರವಾಗಿ ಬಿಡಿಸಲು ಸಾಧ್ಯವಾಗುವದಿಲ್ಲ.

(೨) ಒಂದೇ ಸ್ಥಳದಿಂದ ಎಲ್ಲ ಅಧಿಕಾರಗಳನ್ನು ನಡೆಸಲು ಅನೇಕ ಅಧಿಕಾರಿಗಳು ಬೇಕಾಗುತ್ತಾರೆ. ಈ ಎಲ್ಲ ಅಧಿಕಾರಿಗಳಿಗೆ ಉಚ್ಚ ಸಂಬಳ ಕೊಡಬೇಕಾಗುವದರಿಂದ ಆಡಳಿತೆಯ ವೆಚ್ಚವು ಹೆಚ್ಚಾಗುತ್ತದೆ.

(೩) ಸ್ಥಳಿಕ ಸಮಸ್ಯೆಗಳನ್ನು ಸ್ಥಳಿಕ ಜನರೇ ಹೆಚ್ಚು ಚೆನ್ನಾಗಿ ಬಿಡಿಸಬಲ್ಲರು. ಈ ಸಮಸ್ಯೆಗಳನ್ನು ಬಿಡಿಸಲು ಅವಶ್ಯಕವಾದ ಜ್ಞಾನವು ಕೇಂದ್ರ ಸರಕಾರಕ್ಕೆ ಇರುವ ಸಂಭವ ಕಡಿಮೆ.

(೪) ಕೇಂದ್ರ ಸರಕಾರವೇ ಎಲ್ಲ ಕೆಲಸಗಳನ್ನು ಮಾಡತೊಡಗಿದರೆ ಸ್ಥಳಿಕ ಜನರು ತಮ್ಮ ಸಮಸ್ಯೆಗಳ ಬಗ್ಗೆ ಆಸ್ಥೆ ವಹಿಸುವದಿಲ್ಲ. ಮತ್ತು ಆಡಳಿತೆಯಲ್ಲಿ ಅವರು ಭಾಗವಹಿಸದಿರುವದರಿಂದ ಆಡಳಿತೆಯ ಬಗ್ಗೆ ಅವರಿಗೆ ಜ್ಞಾನವು ಆಗುವದಿಲ್ಲ. ಹೀಗಾಗಿ ಅವರಿಗೆ ಉತ್ತಮ ದರ್ಜೆಯ ನಾಗರಿಕರಾಗಲು ಅನುವು ದೊರೆಯುವದಿಲ್ಲ.

**ಸಂಯುಕ್ತ ಸರಕಾರವು** (Federal Government)

ಸಂಯುಕ್ತ ರಾಜ್ಯಘಟನೆಯೆಂದರೆ ಸ್ವಂತ್ರವಾದ ರಾಜಕೀಯ ಘಟಕಗಳ ಸಂಹತಿ. ಈ ಸಂಯುಕ್ತ ಸರಕಾರದ ಪದ್ಧತಿಯಲ್ಲಿ ಸ್ವತಂತ್ರವಾದ ರಾಜಕೀಯ ಘಟಕಗಳು ತಮ್ಮಲ್ಲಿದ್ದ ಕೆಲವೊಂದು ಅಧಿಕಾರಗಳನ್ನು ತಮ್ಮೆಲ್ಲರ ಪರವಾಗಿ ನಿರ್ವಹಿಸಲು ತಮ್ಮಿಂದಲೇ ಆರಿಸಲ್ಪಟ್ಟ ಒಂದು ಸಂಯುಕ್ತ ಮಂಡಲಕ್ಕೆ ಒಪ್ಪಿಸಿ ಉಳಿದ ವಿಷಯಗಳಲ್ಲಿ ತಮಗೆ ಸರಿದೋರಿದಂತೆ ವರ್ತಿಸುತ್ತವೆ. ಪ್ರತಿಯೊಂದು ಘಟಕವು ತನ್ನ ಪ್ರದೇಶದಲ್ಲಿ ತನ್ನ ಅಧಿಕಾರವನ್ನು ಇಟ್ಟುಕೊಂಡು ಸಂಯುಕ್ತ ಸರಕಾರಕ್ಕೆ ಕೆಲವೊಂದು ವಿಷಯಗಳನ್ನಷ್ಟೇ ಒಪ್ಪಿಸುತ್ತದೆ. ಈ ರೀತಿಯಾಗಿ ಸಂಯುಕ್ತ ಮಂಡಳಕ್ಕೆ ಒಪ್ಪಿಸಲಾದ ವಿಷಯಗಳು ಇಡೀ ರಾಷ್ಟ್ರಕ್ಕೆ ಸಂಬಂಧಿಸಿದವುಗಳಿದ್ದು ಅವುಗಳ ವಿಷಯವಾಗಿ ರಾಷ್ಟ್ರದಲ್ಲೆಲ್ಲ ಒಂದೇ ಬಗೆಯ ಕಾನೂನುಗಳಿರುವದು ಅವಶ್ಯ. ಘಟಕಗಳ ಸರಕಾರಗಳು ಸಂಯುಕ್ತ ಸರಕಾರಕ್ಕೆ ಸರಿಸಮಾನವಾಗಿರುತ್ತವೆ. ಹೀಗೆ ಒಂದು ಬಗೆಯ ದ್ವಿದಯಿ ರಾಜ್ಯಪದ್ಧತಿ ಇರುತ್ತದೆನ್ನಬಹುದು. ನಾಗರಿಕರು ಘಟಕದ ಸರಕಾರಕ್ಕೂ ಮತ್ತು ಸಂಯುಕ್ತ ಸರಕಾರಕ್ಕೂ ನಿಷ್ಠರಾಗಿರಬೇಕು.

ಪ್ರೊ. ಡಾಯಿಸಿಯವರ ಅಭಿಪ್ರಾಯದ ಮೇರೆಗೆ ಸಂಯುಕ್ತ ಸರಕಾರದ ನಿರ್ಮಾಣಕ್ಕೆ ಎರಡು ಸಂಗತಿಗಳು ಅವಶ್ಯ:—

(೧) "ಒಂದೇ ಬಗೆಯ ರಾಷ್ಟ್ರೀಯತೆಯ ಝುಳಕುಳ್ಳ; ಜನಾಂಗೇತಿಹಾಸಗಳ ಸಾಮ್ಯವುಳ್ಳ, ಸ್ವತಂತ್ರ ರಾಜಕೀಯ ಘಟಕಗಳ" ಅಸ್ತಿತ್ವ.

(೨) ಈ ಘಟಕಗಳಲ್ಲಿ ಸಂಹತಿಯ ಬಗ್ಗೆ ಉತ್ಕಟವಾದ ಇಚ್ಛೆ ಇರಬೇಕು. ಆದರೆ ಅವು ಐಕ್ಯವನ್ನು ಬಯಸಕೂಡದು.

**ಸಂಯುಕ್ತ ಸರಕಾರದ ಮುಖ್ಯ ಲಕ್ಷಣಗಳು:—**

(೧) ಘಟನೆಯ ಪ್ರಾಧಾನ್ಯ; ಘಟನೆಯು ಸುಲಭವಾಗಿ ಬದಲಿಸಲು ಬಾರದಂತಹದಿರಬೇಕು.

(೨) ಘಟಕಗಳಲ್ಲಿ ನಿಶ್ಚಿತವಾದ ಅಧಿಕಾರವಿತರಣೆಯಿರಬೇಕು.

(೩) ಘಟನೆಯ ಅರ್ಥವನ್ನು ಗೊತ್ತುಹಚ್ಚಲು ಸಂಯುಕ್ತ ನ್ಯಾಯಾಲಯವಿರಬೇಕು.

ಲಾಭಗಳು:—

(೧) ಸಂಯುಕ್ತ ಸರಕಾರದಲ್ಲಿ ಸ್ವರಾಜ್ಯದ ಜೊತೆಗೆ ರಾಷ್ಟ್ರೀಯ ಐಕ್ಯವೂ ಇರುತ್ತದೆ. ಘಟಕಗಳು ತಮ್ಮ ಆಂತರಿಕ ಆಡಳಿತೆಯಲ್ಲಿ ಸ್ವತಂತ್ರವೂ ಸ್ವಾಯತ್ತವೂ ಇರುತ್ತವೆ. ಮತ್ತು ಅದೇ ಕಾಲಕ್ಕೆ ಅಖಿಲ ರಾಷ್ಟ್ರಕ್ಕೆ ಸಂಬಂಧಿಸಿದ ವಿಷಯಗಳು ಸಂಯುಕ್ತ ಸರಕಾರದಿಂದ ನಿರ್ವ ಹಿಸಲ್ಪಡುತ್ತವೆ.

(೨) ಇದು ರಾಷ್ಟ್ರೀಯ ಮತ್ತು ಸ್ಥಾನಿಕ ಸರಕಾರಗಳ ನಡುವಿನ ಶ್ರಮವಿಭಾಗದ ತತ್ವದ ಮೇಲೆ ಆಧಾರಭೂತವಾಗಿರುತ್ತದೆ. ಇದರಿಂದ ಸ್ಥಾನಿಕ ಸಮಸ್ಯೆಗಳ ಬಗ್ಗೆ ಸ್ಥಳಿಕರಿಗೆ ಇರುವ ಜ್ಞಾನದ ಲಾಭವನ್ನು ತೆಗೆದು ಕೊಂಡಂತಾಗುವದು. ಇದಲ್ಲದೆ ಸಂಯುಕ್ತ ಸರಕಾರವು ಅಖಿಲ ರಾಷ್ಟ್ರಕ್ಕೆ ಸಂಬಂಧಿಸಿದ ವಿಷಯಗಳನ್ನು ಒಳ್ಳೇ ಚೆನ್ನಾಗಿ ನೋಡಿಕೊಂಡು ಹೋಗು ತ್ತದೆ.

(೩) ಇದು ವಿಶೇಷತಃ ದೊಡ್ಡ ರಾಷ್ಟ್ರಗಳಿಗೆ ಹೆಚ್ಚು ಉಪಯುಕ್ತ ವಾಗಿರುತ್ತದೆ. ಸ್ಥಳಿಕ ರೂಢಿಗಳು ಆಚಾರ ವಿಚಾರಗಳು, ಭಾಷೆ, ಸಂಸ್ಕೃತಿ ಮುಂತಾದವುಗಳಿಗೆ ಧಕ್ಕೆ ತಾರದೆ ಅಖಿಲ ರಾಷ್ಟ್ರಕ್ಕೆ ಸಂಬಂಧಿಸಿದ ವಿಷಯ ವಾಗಿ ಒಂದೇ ಬಗೆಯ ಧೋರಣೆಯನ್ನು ತಳೆಯಲು ಅನುಕೂಲತೆಯನ್ನು ಕಲ್ಪಿಸಿಕೊಡುತ್ತದೆ.

(೪) ಅನೇಕ ಘಟಕಗಳು ಒಂದೆಡೆಗೆ ಕೂಡುವದರಿಂದ ರಾಷ್ಟ್ರದ ಶಕ್ತಿಯು ಬೆಳೆಯುತ್ತದೆ. ರಾಷ್ಟ್ರಕ್ಕೆ ಅಂತರರಾಷ್ಟ್ರೀಯ ಪ್ರತಿಷ್ಠೆಯು ಪ್ರಾಪ್ತವಾಗುತ್ತದೆ.

ಹಾನಿಗಳು:—

(೧) ಏಕೀಕೃತ ಸರಕಾರದಲ್ಲಿ ಕಂಡುಬರುವ, ಐಕ್ಯ, ಸಾಮರ್ಥ್ಯ, ಕಾರ್ಯಕ್ಷಮತೆ, ಕಾರ್ಯವನ್ನು ವಿಲಂಬವಿಲ್ಲದೆ ಮಾಡುವದು ಮುಂತಾದ ಗುಣಗಳು ಇದರಲ್ಲಿರುವದಿಲ್ಲ.

(೨) ಆಡಳಿತೆಯ ವೆಚ್ಚವು ವಿಪರೀತವಾಗಿರುತ್ತದೆ. ಕಾರಣವೆಂದರೆ ಸಂಯುಕ್ತ ಸರಕಾರವು ಮತ್ತು ಬೇರೆ ಬೇರೆ ಘಟಕಗಳು ತಮತಮಗೆ ಬೇಕಾ ಗುವ ಅಧಿಕಾರಿಗಳನ್ನು ನೇಮಿಸಿಕೊಳ್ಳುತ್ತವೆ.

(೩) ಪರರಾಷ್ಟ್ರಗಳ ಸಂಬಂಧದಲ್ಲಿ ಧೋರಣೆಯನ್ನು ವಹಿಸುವಾಗ ಇದು ದುರ್ಬಲವಾಗಿ ಉಳಿಯುವ ಸಂಭವವೇ ಹೆಚ್ಚು.

(೪) ಸಂಯುಕ್ತ ಸರಕಾರಕ್ಕೆ ಎಲ್ಲ ಘಟಕಗಳ ಮೇಲೆ ಒಂದೇ ಬಗೆಯ ಅಧಿಕಾರವನ್ನು ನಡೆಸಲು ಬರುವದಿಲ್ಲ. ಇದಲ್ಲದೆ ಆಂತರಿಕ ಆಡಳಿತೆಯಲ್ಲಿ ಆಯಾ ಘಟಕಗಳು ತಮಗೆ ಸರಿದೋರಿದ ಮಾರ್ಗವನ್ನು ಅವಲಂಬಿಸುತ್ತವೆ. ಹೀಗಾಗಿ ರಾಷ್ಟ್ರದಲ್ಲೆಲ್ಲ ಒಂದೇ ಬಗೆಯ ಆಡಳಿತೆ ಮತ್ತು ಕಾನೂನಗಳ ಸಾಮ್ಯ ಕಂಡು ಬರುವದಿಲ್ಲ.

(೫) ನಾಗರಿಕನಿಗೆ ದ್ವಿದಲ ರಾಜ್ಯನಿಷ್ಠೆಯೂ ಮತ್ತು ಆಡಳಿತೆಯಲ್ಲಿ ದ್ವಿದಲ ರಾಜ್ಯಪದ್ಧತಿಯೂ ಇರುವದರಿಂದ ದೇಶಕ್ಕೆ ಅನರ್ಥ ಉಂಟಾಗುವ ಸಂಭವವು ಹೆಚ್ಚು.

ಹಿಂದುಸ್ಥಾನದಲ್ಲಿ ಅನೇಕ ಬಗೆಯ ವೈವಿಧ್ಯತೆಯಿರುವದರಿಂದಲೂ (ಭಿನ್ನ ಭಿನ್ನ ಜಾತಿ, ಮತ, ಪಂಥ, ಆಚಾರವಿಚಾರ, ಸಂಸ್ಕೃತಿ, ಭಾಷೆ, ಮುಂ.) ಮತ್ತು ಅದೇ ಕಾಲಕ್ಕೆ ಒಂದು ಬಗೆಯ ಐಕ್ಯತೆಯು ಕಂಡುಬರುವದರಿಂದಲೂ ಸಂಯುಕ್ತ ಸರಕಾರವೇ ಹಿಂದುಸ್ಥಾನಕ್ಕೆ ಯೋಗ್ಯವಾದ ಸರಕಾರವೆಂದು ಎಲ್ಲ ರಾಜನೀತಿ ಪಂಡಿತರ ಅಭಿಪ್ರಾಯ. ಮೇಲಾಗಿ ಹಿಂದುಸ್ಥಾನದ ಕ್ಷೇತ್ರವು ಬಹಳೇ ವಿಶಾಲವಾಗಿರುವದರಿಂದ ಸಂಯುಕ್ತ ಸರಕಾರವನ್ನು ಬಿಟ್ಟು ಉಳಿದ ಯಾವ ಸರಕಾರವೂ ಅಷ್ಟೊಂದು ಯಶಸ್ವಿಯಾಗಲಾರದು. ಆದುದರಿಂದಲೇ ಘಟನಾಸಮಿತಿಯು ಈ ಪದ್ಧತಿಯ ತತ್ವಗಳನ್ನೊಳಗೊಂಡ ಒಕ್ಕೂಟ ಸರಕಾರವೇ ಹಿಂದುಸ್ಥಾನಕ್ಕೆ ಯೋಗ್ಯವಾದುದೆಂದು ನಿರ್ಧರಿಸಿತು.

### ರಾಷ್ಟ್ರಸಂಘ (Confederation)

ಈ ಪದ್ಧತಿಯಲ್ಲಿ ಸ್ವತಂತ್ರ ರಾಜಕೀಯ ಘಟಕಗಳು ಒಂದು ಸಾಮಾನ್ಯ ಧ್ಯೇಯಕ್ಕೋಸುಗ ಒಂದೆಡೆಗೆ ಕೂಡಿ ಒಂದು ಸಂಯುಕ್ತ ಮಂಡಲವನ್ನು ನಿರ್ಮಿಸಿ ಆ ಧ್ಯೇಯ ಸಾಧನೆಗಾಗಿ ತಮ್ಮಲ್ಲಿದ್ದ ಕೆಲವೊಂದು ಅಧಿಕಾರಗಳನ್ನು ಆ ಮಂಡಲಕ್ಕೆ ಬಿಟ್ಟುಕೊಡುತ್ತವೆ. ಉದಾ:-ಸಂರಕ್ಷಣೆ ಮುಂ. ಆ ಧ್ಯೇಯವು ಪೂರ್ತಿಯಾದೊಡನೆ ಆ ಸಂಯುಕ್ತ ಸರಕಾರವು ವಿಸರ್ಜಿಸಲ್ಪಡುತ್ತದೆ. ಈ ಧ್ಯೇಯ ಸಾಧನೆಗಿಂತ ಪೂರ್ವದಲ್ಲಿಯೂ ಯಾವಹಾದರೊಂದು

ಘಟಕಕ್ಕೆ ಸಂಯುಕ್ತ ಸರಕಾರದಿಂದ ಹೊರಬೀಳಬೇಕೆಂದೆನಿಸಿದರೆ ಹಾಗೆ ಮಾಡಲು ಅದಕ್ಕೆ ಪೂರ್ಣ ಸ್ವಾತಂತ್ರ್ಯವಿರುತ್ತದೆ. ಇದರೊಳಗಿನ ಪ್ರತಿಯೊಂದು ಘಟಕಕ್ಕೂ ಸಾರ್ವಭೌಮತ್ವವಿರುತ್ತದೆ. ಕೆಲವೊಂದು ದೇಶಗಳಲ್ಲಿ ಮೊದಲು ರಾಷ್ಟ್ರಸಂಘ ಸರಕಾರವು ಸ್ಥಾಪಿಸಲ್ಪಟ್ಟು ಕಾಲಾಂತರದಿಂದ ಅದು ಸಂಯುಕ್ತ ಸರಕಾರವಾಗಿ ಮಾರ್ಪಟ್ಟ ಉದಾಹರಣೆಗಳಿವೆ. ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು ಇಂಥವುಗಳಲ್ಲೊಂದು.

### ಸಂಯುಕ್ತ ಸರಕಾರ ಮತ್ತು ರಾಷ್ಟ್ರಸಂಘ
### (Federation and Confederation)

(೧) ರಾಷ್ಟ್ರಸಂಘವು ಸಾಮಾನ್ಯ ಧ್ಯೇಯಕ್ಕಾಗಿ ಕೆಲಕಾಲದ ವರೆಗೆ ಮಾತ್ರ ಬಾಳುವ ಸಂಯುಕ್ತ ಸರಕಾರವು. ಆದರೆ ಸಂಯುಕ್ತ ಸರಕಾರದಲ್ಲಿ ಈ ಸಂಗತಿಯು ಕೊನೆಯವರೆಗೆ ಉಳಿಯುತ್ತದೆ.

೨) ಸಂಯುಕ್ತ ಸರಕಾರದಲ್ಲಿ ಒಮ್ಮೆ ಸೇರಿದ ರಾಜಕೀಯ ಘಟಕಕ್ಕೆ ಮಂಡಲದಿಂದ ಹೊರಬೀಳಲು ಬರುವದಿಲ್ಲ. ಆದರೆ ರಾಷ್ಟ್ರಸಂಘದಲ್ಲಿ ಅದು ಸುಲಭ ಸಾಧ್ಯವು.

(೩) ಸಂಯುಕ್ತ ಸರಕಾರದಲ್ಲಿ ಸಾರ್ವಭೌಮತ್ವವು ಸಂಯುಕ್ತ ಮಂಡಲ ಮತ್ತು ರಾಜಕೀಯ ಘಟಕಗಳ ನಡುವೆ ವಿಭಾಗಿಸಲ್ಪಟ್ಟಿರುತ್ತದೆ. ಆದರೆ ರಾಷ್ಟ್ರಸಂಘದಲ್ಲಿ ಅದು ಪ್ರತಿಯೊಂದು ರಾಜಕೀಯ ಘಟಕದ ಸರಕಾರದಲ್ಲಿಯಷ್ಟೇ ಉಳಿಯುತ್ತದೆ.

ಮೇಲಿನ ವರ್ಗೀಕರಣವಲ್ಲದೆ ಸರಕಾರಗಳನ್ನು ಅಧಿಕಾರಿವರ್ಗಗಳ ಸರ್ಕಾರ (Bureaucratic) ಮತ್ತು ಲೋಕಪ್ರಿಯ (Popular) ಸರಕಾರ ಎಂದೂ ವಿಭಾಗಿಸಬಹುದು. ಅಧಿಕಾರಿವರ್ಗಗಳ ಸರಕಾರದಲ್ಲಿ ಕೆಲವೊಂದು ಮಟ್ಟದ ಶಿಕ್ಷಣವನ್ನು ಪಡೆದು ನಿರ್ದಿಷ್ಟವಾದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಸರ್ಕಾರೀ ಸೇವೆಯನ್ನು ಸ್ವೀಕರಿಸಿದ ಅಧಿಕಾರಿಗಳು ದಿನಂಪ್ರತಿಯ ಆಡಳಿತೆಯನ್ನು ಸಾಗಿಸುತ್ತಾರೆ. ಈ ಅಧಿಕಾರಿಗಳ ಒಂದು ಮಾಲಿಕೆಯೇ ಇರುತ್ತದೆ. ಪ್ರತಿಯೊಬ್ಬ ಅಧಿಕಾರಿಯು ತನ್ನ ಮೇಲಾಧಿಕಾರಿಗೆ ಹೊಣೆಗಾರನಿರುತ್ತಾನೆ. ಆದರೆ ಜನತೆಗೆ ಹೊಣೆಗಾರನಿರುವದಿಲ್ಲ.

ಲೋಕಪ್ರಿಯ ಸರಕಾರವು ಜನತೆಯಿಂದಲೇ ರಚಿತವಾದ ಸರ್ಕಾರ ವಿರುತ್ತದೆ. ಈ ಜನರು ಕೆಲವೊಂದು ಅವಧಿಯವರೆಗೆ ಕೆಲಸಮಾಡಿ ನಂತರ ಜನರಿಂದ ಆರಿಸಲ್ಪಟ್ಟವರಿಗೆ ಅಧಿಕಾರವನ್ನು ಬಿಟ್ಟುಕೊಟ್ಟು ತಾವು ನಿವೃತ್ತ ರಾಗುತ್ತಾರೆ.

**ಉತ್ತಮ ಸರಕಾರವೆಂದರೇನು ?**

ಸರಕಾರದ ಪ್ರಭೇದಗಳು ಅನೇಕವಿದ್ದರೂ ಅವೆಲ್ಲವೂ ಉತ್ತಮವೆಂದು ಹೇಳಲಾಗುವದಿಲ್ಲ ಪ್ರತಿಯೊಂದರಲ್ಲಿಯೂ ಗುಣದೋಷಗಳು ಇರುತ್ತವೆ. ಕಾಲಮಾನ ಪರಿಸ್ಥಿತಿಗೆ ಅನುಸರಿಸಿ ಒಂದೊಂದು ಸರಕಾರವು ಒಂದೊಂದು ರಾಷ್ಟ್ರಕ್ಕೆ ಹಿತಕರವೆನಿಸಬಹುದು. ಆದರೆ ಅಷ್ಟರಿಂದಲೇ ಆ ಸರಕಾರವು ಉತ್ತಮ ಸರಕಾರವೆನಿಸಲಾರದು. ವಿಶಿಷ್ಟ ಪಕ್ಷ-ಸಂಗಡಗಳ ಹಿತವನ್ನು ಸಾಧಿಸುವ ಸರಕಾರವು ಉತ್ತಮವೆನಿಸಲಾರದು. ದೇಶದ ಒಂದು ಭಾಗದಲ್ಲಿದ್ದು ತನ್ನ ಅಧಿಕಾರದಿಂದ ಮತ್ತು ತನ್ನ ಆಜ್ಞೆಗಳ ಮೂಲಕ ದೇಶದಲ್ಲಿ ಕೇವಲ ಶಾಂತಿ ಮತ್ತು ಸುವ್ಯವಸ್ಥೆಯನ್ನು ನೆಲೆಗೊಳಿಸುವ ಸರಕಾರವೂ ಉತ್ತಮ ಸರಕಾರವಲ್ಲ. ಈ ಎಲ್ಲ ಹೊಣೆಗಾರಿಕೆಗಳನ್ನು ನಿರ್ವಹಿಸುವದರ ಜೊತೆಗೆ ಉತ್ತಮ ಸರಕಾರವು ತನ್ನ ಪ್ರಜೆಗಳಲ್ಲಿ ನೈತಿಕ ಮತ್ತು ಬೌದ್ಧಿಕ ವಿಕಾಸಕ್ಕೆ ಎಡೆಗೊಟ್ಟು ಅವರಲ್ಲಿ ರಾಷ್ಟ್ರೀಯ ಭಾವನೆ ಹುಟ್ಟಿಸಿ ದೇಶದ ಏಳ್ಗೆಯನ್ನು ಸಾಧಿಸಿ ಸಮಾಜದಲ್ಲಿ ಸೌಹಾರ್ದ್ರವನ್ನು ಹುಟ್ಟಿಸುತ್ತದೆ. ಪ್ರತಿಯೊಬ್ಬ ನಾಗರಿಕನಲ್ಲಿ "ದೇಶದ ಆಡಳಿತೆ ಕೆಲವೊಂದು ರಾಜಕಾರಣಿಗಳ ಸೊತ್ತಾಗಿರದೆ ಪ್ರತಿಯೊಬ್ಬ ತಿಳುವಳಿಕೆಯುಳ್ಳ ವ್ಯಕ್ತಿಗೂ ಅದರಲ್ಲಿ ಭಾಗವಹಿಸುವ ಅಧಿಕಾರವಿದೆ." ಎಂಬ ಭಾವನೆಯು ನೆಲೆಗೊಳ್ಳಬೇಕು. ಹೀಗೆ ಅದರಲ್ಲಿ ಪ್ರತಿಯೊಬ್ಬನಿಗೂ ಆಸ್ಥೆ ಹುಟ್ಟಿ ತನ್ನದೇ ಎಂದು ಅವನಿಗೆ ಅನಿಸುವದರಿಂದ ಅವನು ಅದರಲ್ಲಿ ಭಾಗವಹಿಸಲು ಉದ್ಯುಕ್ತನಾಗುವನು. ಇದುವೇ ಸ್ವರಾಜ್ಯವು (Self Govt). ಸ್ವರಾಜ್ಯದಲ್ಲಿ ಎಷ್ಟೇ ಕುಂದುಕೊರತೆಗಳು ಇದ್ದರೂ ಕಾಲಾಂತರದಲ್ಲಿ ಅವು ಅಳಿದು ಹೋಗುವದರಿಂದ ಸ್ವರಾಜ್ಯ ಅರ್ಥಾತ್ ಪ್ರಜಾಪ್ರಭುತ್ವವೇ ಅತ್ಯುತ್ತಮವಾದುದು. (Good Government is no substitute for Self Government)

**ಸಾರ್ವಜನಿಕ ಅಭಿಪ್ರಾಯ:—**

ಪ್ರಜಾಪ್ರಭುತ್ವವೇ ಅತ್ಯುತ್ತಮವಾದ ಸರಕಾರವೆಂಬುದು ಮೇಲಿನ ವಿವೇಚನೆಯಿಂದ ಕಂಡುಬರದಿರಲಾರದು. ಈ ಪ್ರಜಾಪ್ರಭುತ್ವಕ್ಕೆ ಸಾರ್ವಜನಿಕ ಅಭಿಪ್ರಾಯವೇ ಜೀವಾಳ. ಸಾರ್ವಜನಿಕ ಅಭಿಪ್ರಾಯವೆಂದರೆ ಸಾಮಾನ್ಯವಾಗಿ ಜನರು ಒಂದು ವಿಷಯದ ಬಗ್ಗೆ ಪಡುವ ಅಭಿಪ್ರಾಯ. ಎಲ್ಲ ಜನರ ಏಕಾಭಿಪ್ರಾಯವೆಂತಲ್ಲ. ಬಹು ಜನರ ಅಭಿಪ್ರಾಯವೆಂತಲೂ ಅಲ್ಲ. ವಿವಿಧ ಪಕ್ಷಪಂಗಡಗಳ ಹಿತ ಸಾಧಿಸುವ ಅಭಿಪ್ರಾಯವೂ ಅಲ್ಲ. ಆದರೆ ಅದು ಬುದ್ಧಿಗೆ ಒಪ್ಪುವಂತಹದಿದ್ದು ಇಡೀ ಸಮಾಜದ ಹಿತವೇ ಅದರ ಗುರಿಯಾಗಿರುತ್ತದೆ. ಅಲ್ಪ ಸಂಖ್ಯಾಕರಿಗೆ ಆ ಅಭಿಪ್ರಾಯವು ಸಮ್ಮತವಾಗಲು ಅವರ ಮನವರಿಕೆಯೇ ಕಾರಣವಾಗಿರಬೇಕು; ಭಯವು ಕಾರಣವಾಗಿರಬಾರದು.

ವೃತ್ತಪತ್ರಿಕೆ, ವೇದಿಕೆ, ಪಕ್ಷ ಪಂಗಡಗಳು, ಮತ್ತು ಪ್ರಾತಿನಿಧಿಕ ಸಭೆ ಇವೇ ಸಾರ್ವಜನಿಕ ಅಭಿಪ್ರಾಯವನ್ನು ವ್ಯಕ್ತಗೊಳಿಸುವ ಸಾಧನಗಳು. ಇದಲ್ಲದೆ ಸಾಹಿತ್ಯ, ಚಲಚ್ಚಿತ್ರ, ಬಾನುಲಿ, ಶೈಕ್ಷಣಿಕ ಸಂಸ್ಥೆಗಳು, ಚುನಾವಣೆಗಳು, ಧಾರ್ಮಿಕ ಸಂಸ್ಥೆಗಳು ಮುಂತಾದವು ಕೂಡ ಅದೇ ಕಾರ್ಯವನ್ನು ಮಾಡುತ್ತವೆ.

**ವೃತ್ತಪತ್ರಿಕೆ:—** ಇದು ಸಾರ್ವಜನಿಕ ಮತವನ್ನು ರೂಪುಗೊಳಿಸಲು ಮತ್ತು ವ್ಯಕ್ತಗೊಳಿಸಲು ಅತ್ಯಂತ ಪ್ರಬಲವಾದ ಸಾಧನ. ಸಾಮಾನ್ಯ ಜನರು ಸಾರ್ವಜನಿಕ ವಿಷಯಗಳ ಬಗ್ಗೆ ವೃತ್ತಪತ್ರಗಳನ್ನು ಓದಿಯೇ ತಮ್ಮ ಅಭಿಪ್ರಾಯವನ್ನು ರೂಪುಗೊಳಿಸುತ್ತಾರೆ. ವೃತ್ತಪತ್ರಿಕೆಗಳು ಸರಕಾರದ ಹಸ್ತಕ್ಷೇಪದಿಂದ ಮುಕ್ತವಾಗಿ ಪಕ್ಷಾತೀತವಾಗಿದ್ದರೆ ಮಾತ್ರ ತಮ್ಮ ಕಾರ್ಯವನ್ನು ಸರಿಯಾಗಿ ಮಾಡಬಲ್ಲವು. ಅವು ತಮ್ಮ ಧೋರಣೆಯನ್ನೇ ಮುಂದೆ ಚಾಚುವ ಶ್ರೀಮಂತರ ವಶವಾಗಬಾರದು. ಸಂಪಾದಕೀಯ ಟೀಕೆ ಟಿಪ್ಪಣೆಗಳು ಸತ್ಯ ಮತ್ತು ನ್ಯಾಯಕ್ಕೆ ಅಂಟಿಕೊಂಡು ನಿಷ್ಪಕ್ಷಪಾತವಾಗಿರಬೇಕು.

**ವೇದಿಕೆ; (Platform):—** ಸಾರ್ವಜನಿಕ ಸಭೆಗಳಲ್ಲಿ ಬೇಕಾದವರಿಗೆ ತಮ್ಮ ಕಷ್ಟನಷ್ಟಗಳನ್ನು ವ್ಯಕ್ತಗೊಳಿಸಲು ಸಾಧನವಾಗುತ್ತದೆ. ಮುಖಂಡರು

ರಾಜಕೀಯ ವಿಷಯಗಳ ಮೇಲೆ, ಸರಕಾರದ ಕೃತಿಗಳ ಬಗ್ಗೆ ಭಾಷಣಮಾಡಿ ಜನಸಾಮಾನ್ಯರಿಗೆ ನಿಜಪರಿಸ್ಥಿತಿಯ ಅರಿವನ್ನು ಮಾಡಿಕೊಡಬಲ್ಲರು. ವಿವಿಧ ದೃಷ್ಟಿಕೋನಗಳಿಂದ ಚರ್ಚಿಸಲ್ಪಟ್ಟ ಈ ಭಾಷಣಗಳನ್ನು ಕೇಳಿ ಜನರು ತಮ್ಮ ಅಭಿಪ್ರಾಯವನ್ನು ಮಾಡಿಕೊಳ್ಳುತ್ತಾರೆ. ಭಾವನೆಗಳನ್ನು ಉದ್ರೇಕಗೊಳಿಸುವ, ವಿಶಿಷ್ಟ ಪಕ್ಷ-ಪಂಗಡಗಳನ್ನು ಎತ್ತಿಹಿಡಿಯುವ, ವಸ್ತುಸ್ಥಿತಿಯನ್ನು ವಿಪರ್ಯಾಸಗೊಳಿಸುವ, ಭಾಷಣಗಳಿಗೆ ಸಾರ್ವಜನಿಕ ಸಭೆಗಳಲ್ಲಿ ಎಡೆಯಿರಬಾರದು. ಇವುಗಳಮೇಲೆ ಸರಕಾರದ ನಿಯಂತ್ರಣವಿರಬೇಕು

**ಪಕ್ಷಪಂಗಡಗಳು:—** ದೇಶದ ಹಿತವನ್ನು ಸಾಧಿಸಲು ಒಂದು ವಿಶಿಷ್ಟ ಧೋರಣೆಯಿಂದ ಪ್ರೇರಿತರಾದ ಕೆಲವೊಂದು ತತ್ವಗಳಿಗೆ ಅಂಟಿಕೊಂಡ ಜನರ ಸಮೂಹಕ್ಕೆ ರಾಜಕೀಯ ಪಕ್ಷವೆನ್ನುವರು. ಸರಕಾರದ ಮುಖ್ಯ ವಿಷಯಗಳ ಬಗ್ಗೆ ಸರಕಾರ ಮತ್ತು ಭಿನ್ನ ಭಿನ್ನ ರಾಜಕೀಯ ಪಕ್ಷಗಳಲ್ಲಿ ಭಿನ್ನಾಭಿಪ್ರಾಯ ವಿರುವದಿಲ್ಲ. ಆದರೆ ಆ ಸಾಮಾನ್ಯವಾದ ಧ್ಯೇಯವನ್ನು ಸಾಧಿಸುವ ಮಾರ್ಗದ ಬಗ್ಗೆ ಎಷ್ಟೋ ಸಲ ಭಿನ್ನಾಭಿಪ್ರಾಯವಾಗುವದುಂಟು. ರಾಜಕೀಯ ಪಕ್ಷವು ತನ್ನ ಧೋರಣೆಯನ್ನು ಜನತೆಯ ಮುಂದೆ ಇಟ್ಟು ತನ್ನೆಡೆಗೆ ಹೆಚ್ಚು ಜನರನ್ನು ಸೆಳೆದುಕೊಂಡು, ತನ್ನ ಬಲವನ್ನು ಹೆಚ್ಚಿಸಲು ಹವಣಿಸುತ್ತದೆ. ಇದು ಮಾಡುವ ಇನ್ನೊಂದು ಮಹತ್ವದ ಕಾರ್ಯವೆಂದರೆ ಚುನಾವಣೆಗಳಲ್ಲಿ ಹೋರಾಡಿ ರಾಜ್ಯಸೂತ್ರಗಳನ್ನು ತನ್ನ ಕೈಯಲ್ಲಿ ತೆಗೆದುಕೊಳ್ಳಲು ಹೆಣಗುವದು.

**ಲಾಭಗಳು:—**

(೧) ಇದಕ್ಕೆ ಬಹಳೇ ಶೈಕ್ಷಣಿಕ ಮಹತ್ವವಿದೆ. ಮತದಾರ ಸಂಘಗಳಲ್ಲಿ ಶಿಸ್ತು ಸಂಘಟನೆಗಳನ್ನು ಹುಟ್ಟಿಸುತ್ತದೆ. ಸ್ವಂಯಸೇವಕ ದಲಗಳನ್ನು ಸಿದ್ಧಗೊಳಿಸಿ, ಅವುಗಳ ಮುಖಾಂತರ ಸಾರ್ವಜನಿಕ ಅಭಿಪ್ರಾಯವನ್ನು ರೂಪುಗೊಳಿಸುತ್ತದೆ. ಇದೇ ಉದ್ದೇಶದಿಂದ ಅದು ಸಾಮಾಜಿಕ ಅನಿಷ್ಟಗಳನ್ನು ದೂರುಮಾಡುವದಕ್ಕಾಗಿ ಚಳವಳಿ ಮಾಡುತ್ತದೆ. ಮತ್ತು ವ್ಯಕ್ತಿ ವ್ಯಕ್ತಿಗಳ ನಡುವಿನ ಕ್ಷುಲ್ಲಕ ಮತಭೇದಗಳನ್ನು ಮರೆಯಲು ಹಚ್ಚುತ್ತದೆ.

(೨) ಹೊಣೆಗಾರ ಸರಕಾರದ ಅಸ್ತಿತ್ವಕ್ಕೆ ಇದು ಅತ್ಯವಶ್ಯಕವಾದದ್ದು. ಮಂತ್ರಿ ಮಂಡಲ ಇಲ್ಲವೆ ವಿರೋಧಿ ಪಕ್ಷವನ್ನು ರಚಿಸಲು ಸುಸಂಘಟಿತವಾದ ಪಕ್ಷಗಳಿಲ್ಲದೆ ಸಾಧ್ಯವಿಲ್ಲ.

(೩) ಸಾಮಾನ್ಯ ಜನರಿಗೆ ತಿಳಿಯದಂತೆ ಮತ್ತು ಕ್ರಾಂತಿಗಳಿಲ್ಲದೆ ಸರಕಾರದಲ್ಲಿ ಮಹತ್ವದ ಬದಲಾವಣೆಗಳನ್ನು ಮಾಡಲು ಈ ಪಕ್ಷಗಳಿಂದಲೇ ಸಾಧ್ಯವು.

**ಹಾನಿಗಳು:—**

(೧) ಇದರಲ್ಲಿ ವೈಯಕ್ತಿಕ ಅಭಿಪ್ರಾಯಕ್ಕೆ ಮತ್ತು ಕೃತಿಗೆ ಸ್ಥಾನ ವಿಲ್ಲ. ಪಕ್ಷವು ತಳೆದ ಧೋರಣೆಯನ್ನು ಆ ಪಕ್ಷದ ಪ್ರತಿಯೊಬ್ಬ ಸದಸ್ಯನು ಮನ್ನಿಸಲೇಬೇಕು. ತನ್ನ ಆಕ್ಷೇಪಗಳು ಏನೇ ಇದ್ದರೂ ಅದಕ್ಕೆ ವಿರುದ್ಧ ವಾಗಿ ವರ್ತಿಸುವಂತಿಲ್ಲ. ತಮಗೂ ತಮ್ಮ ಪಕ್ಷವಾದ ಕಾಂಗ್ರೆಸ್ಸಿಗೂ ಮತ ಭೇದ ವಾದುದರಿಂದ ಸುಭಾಷಚಂದ್ರ ಭೋಸ, ನರಿಮನ್, ಎಂ. ಎನ್. ರಾಯ ಮುಂತಾದವರು ಕಾಂಗ್ರೆಸ್ಸದಿಂದ ಹೊರಬೀಳಬೇಕಾಯಿತು.

(೨) ಭಾಷಣಕಾರರ ಮತ್ತು ಚುನಾವಣೆಗಳಲ್ಲಿ ತಮ್ಮ ಪಕ್ಷಕ್ಕೆ ಮತಗಳನ್ನು ದೊರಕಿಸಿ ಕೊಟ್ಟವರ ವರ್ಚಸ್ಸೇ ಪಕ್ಷಗಳಲ್ಲಿ ಹೆಚ್ಚಾಗಿರುತ್ತದೆ.

(೩) ಯೋಗ್ಯರಾದ ಜನರು ಪಕ್ಷದ ರಾಜಕಾರಣದಲ್ಲಿ ಸಿಲುಕಿ ಬೀಳು ವದರಿಂದ ದೇಶಕ್ಕೆ ಅವರ ಬುದ್ಧಿಮತ್ತೆಯ ಸದುಪಯೋಗದಿಂದಾಗಬಹುದಾ ಗಿದ್ದ ಲಾಭಗಳು ತಪ್ಪಿಹೋಗುತ್ತವೆ.

(೪) ಪಕ್ಷಗಳು ವಾಡಿಕೆಯಾಗಿ ದೊಡ್ಡ ವ್ಯಾಪಾರಸ್ಥರ ಮತ್ತು ಬಂಡವಲಗಾರರ ವರ್ಚಸ್ಸಿಗೆ ಒಳಪಟ್ಟಿರುತ್ತವೆ.

(೫) ಅಲ್ಪ ಸಂಖ್ಯಾಕರಲ್ಲಿದ್ದ ಯೋಗ್ಯ ಜನರಿಗೆ ಮಂತ್ರಿಮಂಡಲ ದಲ್ಲಿ ಸ್ಥಾನವು ದೊರೆಯದಿರುವದರಿಂದ ಅವರ ಬುದ್ಧಿಯ ಲಾಭವು ಜನತೆಗೆ ಲಭಿಸುವದಿಲ್ಲ. ಶಾಸನ ಸಭೆಗಳು ಮೇಲಿಂದ ಮೇಲೆ ಅಧಿಕಾರರೂಢವಾದ ಪಕ್ಷ ಮತ್ತು ಅಧಿಕಾರವನ್ನು ಪಡೆಯಲು ಪ್ರಯತ್ನಿಸುವ ಪಕ್ಷ ಇವೆರಡರ ನಡುವಿನ ಹೋರಾಟದ ರಣಭೂಮಿಯಾಗುತ್ತವೆ.

(೬) ಬೇರೆ ಬೇರೆ ಪಕ್ಷದವರು ಚುನಾವಣೆಯ ಕಾಲಕ್ಕೆ ವಿಚಿತ್ರವಾದ ವಚನಗಳನ್ನು ಜನತೆಗೆ ಕೊಟ್ಟು, ಅದರ ಮುಂದೆ ಭವ್ಯವಾದ ಯೋಜನೆ ಗಳನ್ನು ಮಂಡಿಸುತ್ತಾರೆ. ಆದರೆ ಚುನಾವಣೆಯಲ್ಲಿ ಜಯಪ್ರಾಪ್ತಿಯಾದ ನಂತರ ಇವೆಲ್ಲವೂ ಗಾಳಿಗೋಪುರುಗಳಾಗಿ ಪರಿಣಮಿಸುತ್ತವೆ. ಮುಂದಿನ

ಚುನಾವಣೆಯ ಕಾಲವು ಸಮೀಪಿಸಿದೊಡನೆ ಅಜ್ಞ ಜನರ ಮತಗಳನ್ನು ಸಂಪಾದಿಸಲೋಸುಗ, ಅವರು ಸಂತೋಷಗೊಳ್ಳುವಂತೆ ಅವ್ಯವಹಾರನಾದ ಠರಾವುಗಳನ್ನು ಪಾಸು ಮಾಡುತ್ತಾರೆ.

(೭) ಚುನಾವಣೆಯ ಕಾಲಕ್ಕೆ ದೇಶದ ಶಾಂತಿ, ಮತ್ತು ಸುವ್ಯವಸ್ಥೆಯು ಅಪಾಯಕ್ಕೆ ಈಡಾಗುತ್ತವೆ.

ಪಕ್ಷಗಳನ್ನೇ ನಿರ್ಮೂಲಗೊಳಿಸುವದು ಈ ಹಾನಿಗಳನ್ನು ತಪ್ಪಿಸುವ ಮಾರ್ಗವಲ್ಲ. ಆದಕ್ಕಾಗಿ ಕೆಳಗೆ ಕಾಣಿಸಿದ ಮಾರ್ಗಗಳನ್ನು ಅನುಸರಿಸಬಹುದು.

(೧) ಪಕ್ಷಗಳಿಗೆ ವಿಶಾಲವಾದ ರಾಜಕೀಯ ಮತ್ತು ಸಾಮಾಜಿಕ ತತ್ವಗಳೇ ತಳಹದಿಯಾಗಿರಬೇಕು.

(೨) ಮಹತ್ವದ ಮುದ್ದೆಗಳ ಬಗ್ಗೆಯಾದರೂ ಎಲ್ಲಪಕ್ಷಗಳಲ್ಲಿ ಒಮ್ಮತವಿದ್ದು ಅವು ಆದಷ್ಟು ಸಹಕಾರದಿಂದ ಕೆಲಸ ಮಾಡಬೇಕು.

(೩) ಪಕ್ಷದ ಮುಖಂಡರು ಸ್ವಾರ್ಥ ಸಾಧನೆಗಾಗಿ ತಮ್ಮ ಪಕ್ಷದ ಧೋರಣೆಯನ್ನು ಮತ್ತು ದೇಶದ ಹಿತವನ್ನು ಕಡೆಗಣಿಸಬಾರದು.

(೪) ಪಕ್ಷದ ಸದಸ್ಯರು ನಿಷ್ಠಾವಂತರಾಗಬೇಕು. ಆದರೆ ದಾಸ್ಯವೃತ್ತಿಯವರಾಗಿರಬಾರದು.

(೫) ನಾಗರಿಕರಲ್ಲಿ ಜಾಗ್ರತಿಯನ್ನುಂಟುಮಾಡಿ ಅವರು ಸಾರ್ವಜನಿಕ ವಿಷಯಗಳ ಬಗ್ಗೆ ಆಸ್ಥೆಯನ್ನು ವಹಿಸುವಂತೆ ಮಾಡಬೇಕು.

(೬) ಲಂಚಗೂಳಿತನಕ್ಕೆ ಎಳ್ಳಷ್ಟೂ ಆಸ್ಪದವಿರಬಾರದು.



# ಪ್ರಶ್ನೆಗಳು

(೧) ಪೌರನೀತಿಯ ಅರ್ಥವನ್ನು ಸಂಕ್ಷಿಪ್ತದಲ್ಲಿ ವಿವರಿಸಿ, ಅದರ ವ್ಯಾಪ್ತಿಯನ್ನು ತಿಳಿಸಿ ಹೇಳಿರಿ.

(೨) ಪೌರನೀತಿಯು ವಿಜ್ಞಾನವೋ ಕಲೆಯೋ? ಅದರ ಅಭ್ಯಾಸದ ಪದ್ಧತಿಗಳಾವು? ಅದರ ಮಹತ್ವವನ್ನು ವಿಶದವಾಗಿ ಹೇಳಿರಿ.

(೩) ಪೌರನೀತಿಗೂ, ಇತಿಹಾಸ, ಮಾನಸಶಾಸ್ತ್ರ, ಅರ್ಥಶಾಸ್ತ್ರ, ರಾಜನೀತಿಶಾಸ್ತ್ರ ಮತ್ತು ನೀತಿಶಾಸ್ತ್ರ ಇವುಗಳಿಗೂ ಇರುವ ಸಂಬಂಧವನ್ನು ಸ್ಪಷ್ಟಗೊಳಿಸಿರಿ.

(೪) ನಾಗರಿಕನಾರು? ನಾಗರಿಕನ ಮಹತ್ವದ ಹಕ್ಕುಗಳು ಮತ್ತು ಕರ್ತವ್ಯಗಳಾವವು? ವಿವರಿಸಿರಿ.

(೫) ಸಂಪಾದಿಸಿದ ನಾಗರಿಕತೆಯೆಂದರೇನು? ಮನುಷ್ಯನು ನಾಗರಿಕತೆಯನ್ನು ಹೇಗೆ (ಅ) ಸಂಪಾದಿಸುವನು ಮತ್ತು (ಬ) ಕಳೆದುಕೊಳ್ಳುವನು?

(೬) "ಹಕ್ಕುಗಳ ಕರ್ತವ್ಯಗಳನ್ನು ಸೂಚಿಸುತ್ತವೆ." ಎಂಬ ಮಾತನ್ನು ಕೂಲಂಕಷವಾಗಿ ಚರ್ಚಿಸಿರಿ.

(೭) ಸಮಾಜ ಮತ್ತು ವ್ಯಕ್ತಿಗಳ ನಡುವಿನ ಸಂಬಂಧವನ್ನು ಸ್ಪಷ್ಟವಾಗಿ ವಿವರಿಸಿರಿ.

(೮) "ಕುಟುಂಬವು ನಾಗರಿಕನಲ್ಲಿರಬೇಕಾದ ಸದ್ಗುಣಗಳ ಪೋಷಣೆಯ ಮಂದಿರವು" ಎಂಬ ಮಾತನ್ನು ಉದಾಹರಣವಾಗಿ ಸ್ಪಷ್ಟೀಕರಿಸಿರಿ.

(೯) ಅವಿಭಕ್ತ ಕುಟುಂಬದ ಲಕ್ಷಣಗಳನ್ನು ಹೇಳಿ ಅದು ಕುಸಿದು ಬೀಳುವ ಕಾರಣವನ್ನು ಕೊಡಿರಿ.

(೧೦) ವಿವಾಹದ ಪ್ರಭೇದಗಳನ್ನು ವಿವರಿಸಿ, ಏಕಪತ್ನೀತ್ವ ಪದ್ಧತಿಯೇ ಏಕೆ ಶ್ರೇಷ್ಠವಾದುದು ಎಂಬದನ್ನು ಚರ್ಚಿಸಿರಿ.

(೧೧) ವೈಯಕ್ತಿಕ ಆಸ್ತಿಯನ್ನು ಪುರಸ್ಕರ್ತರ ಹಾಗೂ ವಿರೋಧಕರ ಯುಕ್ತಿಗಳನ್ನು ಹೇಳಿರಿ.

(೧೨) ಜಾತೀಯ ಪದ್ಧತಿಯಿಂದಾಗುವ ಲಾಭ-ಹಾನಿಗಳನ್ನು ವಿವರಿಸಿ ಅದರಿಂದಾಗುವ ಅನಾಹುತಗಳನ್ನು ನಿರ್ಮೂಲಗೊಳಿಸಲು ಕೆಲವು ಉಪಾಯ ಗಳನ್ನು ಸೂಚಿಸಿರಿ.

(೧೩) ಸರಕಾರದ ಮುಖ್ಯ ಅಂಗಗಳಾವವು? ಪ್ರತಿಯೊಂದರ ಕರ್ತವ್ಯ ಗಳನ್ನು ಸಂಕ್ಷಿಪ್ತದಲ್ಲಿ ಬರೆಯಿರಿ.

(೧೪) ಇಮ್ಮನೆಯ ಪದ್ಧತಿ ಹಾಗೂ ಅಪ್ರತ್ಯಕ್ಷ ಚುನಾವಣೆಗಳು ಇರಬೇಕೋ ಎಂಬ ಬಗ್ಗೆ ನಿಮ್ಮ ಅಭಿಪ್ರಾಯವನ್ನು ಸಕಾರಣವಾಗಿ ತಿಳಿಸಿ ಹೇಳಿರಿ.

(೧೫) ಪ್ರಜಾಪ್ರಭುತ್ವ ಮತ್ತು ಸರ್ವಾಧಿಕಾರಿತ್ವ ಪದ್ಧತಿಯ ಗುಣ ದೋಷಗಳನ್ನು ಚರ್ಚಿಸಿ, ಹಿಂದುಸ್ತಾನಕ್ಕೆ ಯಾವದು ಯೋಗ್ಯವಾದುದು ಎಂಬ ಬಗ್ಗೆ ನಿಮ್ಮ ಅಭಿಪ್ರಾಯ ಕೊಡಿರಿ.

(೧೬) ಹೊಣೆಗಾರ ಸರಕಾರವೆಂದರೇನು? ಅದರ ವೈಶಿಷ್ಟ್ಯಗಳಾವವು?

(೧೭) ಪಕ್ಷ–ಪಂಗಡಗಳ ಬಗ್ಗೆ ಇರುವ ಸಾಧಕ–ಬಾಧಕ ಯುಕ್ತಿ ಗಳನ್ನು ತುಲನಾತ್ಮಕವಾಗಿ ಚರ್ಚಿಸಿರಿ.

(೧೮) ಸಾರ್ವಜನಿಕ ಅಭಿಪ್ರಾಯವೆಂದರೇನು? ಅದನ್ನು ವ್ಯಕ್ತ ಗೊಳಿಸುವ ಮುಖ್ಯ ಸಾಧನಗಳಾವು?



* S. L. C. & S. S. C. Examination Question Papers

## 1944

1) How did the family originate? What Part does the Family Play today in (a) the training for citizenship (b) the organization of economic life?

2) Explain how the responsibilities of citizenship are brought out in the enforcement of (a) the traffic regulatons (b) the queue system (c). free and compulsory education acts.

3) (i) When Would you say that a country enjoys responsible self government? (ii) What are the favourable circumstances required to make self government successful? (iii) Is self government to be preferred to good government? Give reasons for your answer.

4) (i) What are the functions of the Judiciary (ii) Why is it important to ensure the independence of the Judiciary (iii) What are the provisions usually made to secure the independence of the Judiciary?

## 1945

1) What is citizenship? What are the chief duties and rights of citizenship?

---

* With the kind permission of the S. S. C. Examination Board. 

2) What is the meaning of caste? How did castes originate? How do they affect individual and collective progress?

3) Describe the appropriate functions of the Legislature, the Executive and the Judiciary in a democratic form of government.

4) What is the proper position of (i) Voters. (ii) Legislative Body and (iii) Executive council in a responsible government?

1946

1) State in brief the characteristics of the Joint Family system in India and explain the causes of its gradual decay.

2) Distinguish between Tribe, Caste and Community. What are the features of the caste system in India?

1947

1) Who is a citizen? what are the principal rights and duties of a citizen.

2) Explain the origin and different forms of the family, and show how it can be called a "school for citizenship"

3) What do you mean by the bicameral system of legislature? What are the advantages and defects of such a system in India?

4) Define Responsible Government. Do we have a Responsible Government now in India. (a) at the Centre and (b) in the Province.

5) Distinguish between the functions of the Legislature, the Executive and the Judiciary.

1948

೧) ಇತ್ತಿತ್ತಲಾಗಿ ಕುಟುಂಬ ಪದ್ಧತಿಯಲ್ಲಿ ಯಾವ ಬದಲಾವಣೆಗಳಾಗಿವೆ? ಭಾರತದಲ್ಲಿಯ ಕುಟುಂಬವು ನಿಜವಾದ ಅಪಾಯಕ್ಕೀಡಾಗುವದರಲ್ಲಿದೆಯೋ?

೨) ಹಕ್ಕು ಮತ್ತು ಕರ್ತವ್ಯ ಇವೆರಡನ್ನೂ ಬೇರ್ಪಡಿಸಲು ಸಾಧ್ಯವಿಲ್ಲ. ಇವೆರಡೂ ಒಂದು ನಾಣ್ಯದ ಎರಡು ಮೈಗಳಂತಿರುವವು. ಈ ಮಾತನ್ನು ಮೂರು ಉದಾಹರಣೆಗಳನ್ನು ಕೊಟ್ಟು ವಿವರಿಸಿರಿ.

೩) ಕ[illegible]ದೆ ಮಂಡಲ ಮತ್ತು ನಿರ್ವಾಹಕ ಮಂಡಲ (Executive) ಇವ[illegible] ಸಂಬಂಧವನ್ನು ಸ್ಪಷ್ಟೀಕರಿಸಿರಿ. ಕಾಯದೆ ಮಂಡಲವು ನಿರ್ವಾಹ[illegible]ಂಡಲದ ಮೇಲೆ ತನ್ನ ಅಧಿಕಾರವನ್ನು ಹೇಗೆ ನಡೆಯಿಸುವದು?

೪) (ಅ) ಮತದಾರ ಸಂಘವೆಂದರೇನು? ಆಡಳಿತದಲ್ಲಿ ಅದು ಯಾವ ಭಾಗವನ್ನು ವಹಿಸುವದು?

(ಬ) "ಮತ (vote) ಎಂದರೆ ಒಂದು ಹಕ್ಕು," ಈ ಮಾತನ್ನು ಸ್ಪಷ್ಟೀಕರಿಸಿರಿ.

1949

1) Who is a citizen? State the rights and duties of a citizen.

2) What are the defects of the present Caste-System? How should these be removed. ?

3) What are the main functions of a Government? "That Government is the best which governs the least" Do you agree.

4) What is a responsible Government? How does it work? What are the conditions necessary for its successful working?

1950

1) "Rights imply duties" In the light of this statement explain the duties of a citizen.

2) Explain "Family is a training ground of civic virtues"

3) Distinguish between Parliamentary and Presidential forms of Government. What form of Government are we having in India now?

4) Bring out the advantages and disadvantages of responsible Government.

5) Enumerate the various forms of Government. Explain the main functions of Government.

1951

1) Discuss the meaning and scope of civics.

2) What are the advantages and disadvantages of the Joint Family System?

3) What are the principal organs of Government? Describe their functions.

4) Bring out clearly the chief characteristics of a Democratic State. Is India fit for Democracy?

5) Distinguish between a citizen and an alien Mention the duties of a citizen.

## OCTOBER 1951

I. Define Civics. What is the importance of the Study of Civics in modern Social life?

II. Mention the advantages and disadvantages of the caste-system.

III. What is State? Distinguish between State and Society.

IV. Define rights. Mention the political rights of a citizen.

V. Distinguish between the federal and unitary forms of Governments.

VI. What are the merits and defects of adult franchise?



## MARCH 1952

೧. ನಾಗರಿಕತ್ವವೆಂದರೇನು? ನಾಗರಿಕತ್ವವನ್ನು ಪಡೆಯುವ ಮಾರ್ಗಗಳಾವವು?

೨. ಕುಟುಂಬಗಳಲ್ಲಿ ಎಷ್ಟು ವಿಧಗಳಿವೆ? ಅವುಗಳ ಮುಖ್ಯ ಗುಣಗಳಾವವು?

೩. ಪ್ರಜಾಪ್ರಭುತ್ವ ಪದ್ಧತಿಯ ಸರಕಾರದಿಂದಾಗುವ ಲಾಭ ಮತ್ತು ಹಾನಿಗಳಾವವು?

೪. ಹೊಣೆಗಾರ ಸರಕಾರವಲ್ಲಿ ಶಾಸನ ಸಭೆಗಳ ಅಧಿಕಾರ ಮತ್ತು ಕರ್ತವ್ಯಗಳಾವವು ?

೫. ಪ್ರಜಾಪ್ರಭುತ್ವದಲ್ಲಿ ನಾಗರಿಕನ ಹುಕ್ಕುಗಳು ಮತ್ತು ಕರ್ತವ್ಯಗಳಾವವು ?

೬. ೧) ಸಮಾಜ ಮತ್ತು ರಾಷ್ಟ್ರ ೨) ಸಾರ್ವಜನಿಕ ಮತ್ತು ಸ್ವಂತ ಆಸ್ತಿ ೩) ವರ್ಗ ಮತ್ತು ಜಾತಿ ಇವುಗಳಲ್ಲಿರುವ ಭೇದಗಳೇನು ? ಸ್ಪಷ್ಟಪಡಿಸಿರಿ.

## BIBLIOGRAPHY


1. Elements of civics — Patwardhan
2. Civics for beginners — N. G. Damle
3. Economics and Civics — C. N. Vakil and J. J. Anjaria
4. A. B. C. of Civics — Beni Prasad
5. Principles of Civics — Saletore
6. Principles of Civics for intermediate Classes — Gupta and Balkrishna
7. Civics (in Kannada) — S. N. C. Rao
8. ಭಾರತದ ಹೊಸ ರಾಜ್ಯಘಟನೆ — ಕರಜಗಿ




I have gone through the book "Civics" written in Kannada by Messrs. B. D. Karajgi and S. Y. Shilwant.

The subject matter in it is written in a simple and lucid style and has been brought uptodate in every respect. All the requirements of the syllabus for the S. S. C. Examination in Civics are fulfilled in this book. It can be said confidently that the S. S. C. students and the general Public interested in the subject will find the book highly useful to them.

**R. K. Lakkundi,**
Retd. Principal,
Govt. Training College for Men,
Dharwar.

The authors of this book have systematically dealt with all the topics included in the syllabus of the S. S. C. Examination in Civics. The treatment of the subject-matter is methodical and exhaustive. This book will be very useful as a text-book for students of the S. S. C. Class.

**H. D. Lele,** M. A., B. T.
Teacher,
Karnatak High School,
Dharwar.



## OCTOBER 1951

I. Define Civics. What is the importance of the Study of Civics in modern Social life?

II. Mention the advantages and disadvant ages of the caste–system.

III. What is State? Distinguish between State and Society.

IV. Define rights. Mention the political rights of a citizen.

V. Distinguish between the federal and unitary forms of Governments.

VI. What are the merits and defects of adult franchise?

## MARCH 1952

೧. ನಾಗರಿಕತ್ವವೆಂದರೇನು ? ನಾಗರಿಕತ್ವವನ್ನು ಪಡೆಯುವ ಮಾರ್ಗಗಳಾವವು ?

೨. ಕುಟುಂಬಗಳಲ್ಲಿ ಎಷ್ಟು ವಿಧಗಳಿವೆ ? ಅವುಗಳ ಮುಖ್ಯ ಗುಣಗಳಾವವು ?

೩. ಪ್ರಜಾಪ್ರಭುತ್ವ ಪದ್ಧತಿಯ ಸರಕಾರದಿಂದಾಗುವ ಲಾಭ ಮತ್ತು ಹಾನಿಗಳಾವವು ?

೪. ಹೊಣೆಗಾರ ಸರಕಾರದಲ್ಲಿ ಶಾಸನ ಸಭೆಗಳ ಅಧಿಕಾರ ಮತ್ತು ಕರ್ತವ್ಯಗಳಾವವು ?

೫. ಪ್ರಜಾಪ್ರಭುತ್ವದಲ್ಲಿ ನಾಗರಿಕನ ಹುಕ್ಕುಗಳು ಮತ್ತು

೬. ೧) ಸಮಾಜ ಮತ್ತು ರಾಷ್ಟ್ರ ೨) ಸಾರ್ವಜನಿಕ ಮತ್ತು ಸ್ವಂತ ಆಸ್ತಿ ೩) ವರ್ಗ ಮತ್ತು ಜಾತಿ ಇವುಗಳಲ್ಲಿರುವ ಭೇದಗಳೇನು ? ಸ್ಪಷ್ಟಪಡಿಸಿರಿ.



## BIBLIOGRAPHY


| | Title | Author |
|---|---|---|
| 1. | Elements of civics | Patwardhan |
| 2. | Civics for beginners | N. G. Damle |
| 3. | Economics and Civics | C. N. Vakil and J. J. Anjaria |
| 4. | A. B. C. of Civics | Beni Prasad |
| 5. | Principles of Civics | Saletore |
| 6. | Principles of Civics for intermediate Classes | Gupta and Balkrishna |
| 7. | Civics (in Kannada) | S. N. C. Rao |
| 8. | ಭಾರತದ ಹೊಸ ರಾಜ್ಯಘಟನೆ | ಕರಜಗಿ |

## OCTOBER 1951

I. Define Civics. What is the importance of the Study of Civics in modern Social life?

II. Mention the advantages and disadvantages of the caste-system.

III. What is State? Distinguish between State and Society.

IV. Define rights. Mention the political rights of a citizen.

V. Distinguish between the federal and unitary forms of Governments.

VI. What are the merits and defects of adult franchise?



## MARCH 1952

೧. ನಾಗರಿಕತ್ವವೆಂದರೇನು? ನಾಗರಿಕತ್ವವನ್ನು ಪಡೆಯುವ ಮಾರ್ಗಗಳಾವವು?

೨. ಕುಟುಂಬಗಳಲ್ಲಿ ಎಷ್ಟು ವಿಧಗಳಿವೆ? ಅವುಗಳ ಮುಖ್ಯ ಗುಣಗಳಾವವು?

೩. ಪ್ರಜಾಪ್ರಭುತ್ವ ಪದ್ಧತಿಯ ಸರಕಾರದಿಂದಾಗುವ ಲಾಭ ಮತ್ತು ಹಾನಿಗಳಾವವು?

೪. ಹೊಣೆಗಾರ ಸರಕಾರದಲ್ಲಿ ಶಾಸನ ಸಭೆಗಳ ಅಧಿಕಾರ ಮತ್ತು ಕರ್ತವ್ಯಗಳಾವವು ?

೫. ಪ್ರಜಾಪ್ರಭುತ್ವದಲ್ಲಿ ನಾಗರಿಕನ ಹಕ್ಕುಗಳು ಮತ್ತು ಕರ್ತವ್ಯಗಳಾವವು ?

೬. ೧) ಸಮಾಜ ಮತ್ತು ರಾಷ್ಟ್ರ ೨) ಸಾರ್ವಜನಿಕ ಮತ್ತು ಸ್ವಂತ ಆಸ್ತಿ ೩) ವರ್ಗ ಮತ್ತು ಜಾತಿ ಇವುಗಳಲ್ಲಿರುವ ಭೇದಗಳೇನು ? ಸ್ಪಷ್ಟಪಡಿಸಿರಿ.

## BIBLIOGRAPHY


1. Elements of civics — Patwardhan
2. Civics for beginners — N. G. Damle
3. Economics and Civics — C. N. Vakil and J. J. Anjaria
4. A. B. C. of Civics — Beni Prasad
5. Principles of Civics — Saletore
6. Principles of Civics for intermediate Classes — Gupta and Bal
7. Civics (in Kannada) — S. N.
8. ಭಾತರದ ಹೊಸ ರಾಜ್ಯಘಟನೆ — ಕರಜಗಿ

I have gone through the book "Civics" written in Kannada by Messrs. B. D. Karajgi and S. Y. Shilwant.

The subject matter in it is written in a simple aBd lucid style and has been brought uptodate in every respect. All the requirements of the syllabus for the S. S. C. Examination in Civics are fulfilled in this book. It can be said confidently that the S. S. C. students and the general Public interested in the subject will find the book highly useful to them.

R. K. Lakkundi,
Retd. Principal,
Govt. Training College for Men,
Dharwar.

The authors of this book have systematically dealt with all the topics included in the syllabus of the S. S. C. Examination in Civics. The treatment of the subject-matter is methodical and exhaustive. This book will be very useful as a text-book for [illegible] of the S. S. C. Class.

H. D. Lele, M. A., B. T.
Teacher,
Karnatak High School,
Dharwar.

## ಇದೇ ಲೇಖಕರ ಬೇರೆ ಪುಸ್ತಕಗಳು



| | |
|---|---|
| ಭಾರತದ ಸಂವಿಧಾನದ ರೂಪರೇಷೆಗಳು | ೦-೧೪—೦ |
| ಭಾರತದ ಹೊಸ ರಾಜ್ಯಘಟನೆ | ೧—೬—೦ |

## ನಮ್ಮ ಇತರ ಪ್ರಕಟನೆಗಳು

| | | |
|---|---|---|
| ಎಸ್. ಎಸ್. ಸಿ. ಸಂಸ್ಕೃತ ಗಾಯಿಡ್ | | ೨—೮—೦ |
| ಸಂಸ್ಕೃತ ಭಾಷಾಪ್ರದೀಪ ಗಾಯಿಡ್ | ೧ | ೧—೪—೦ |
| ,, ,, | ೨ | (ಅಚ್ಚಿನಲ್ಲಿ) |
| ,, ,, | ೩ | ,, |

(ಎಸ್. ಎಸ್. ಸಿ. ವಿದ್ಯಾರ್ಥಿಗಳಿಗಾಗಿ)

| | |
|---|---|
| ಭಾರತದ ಇತಿಹಾಸ ಪ್ರಶ್ನೋತ್ತರ ಸಂಪೂರ್ಣ | ೪—೦—೦ |

ಭಾರತ ಬುಕ್ ಡಿಪೊ, ಧಾರವಾಡ